ನಂತರ ಪ್ರಾಸಿಕೂಷನ್ ಸಾಕ್ಷಿ ಶ್ರೀ ವೀರನಗೌಡ, ವಲಯ ಅರಣ್ಯಾಧಿಕಾರಿ, ಆನವಟ್ಟಿ ಇವರನ್ನು ದಿ:19–11–2011ರಂದು ನ್ಯಾಯಾಲಯಕ್ಕೆ ಕರೆಸಿ, ಸತ್ಯ ಪ್ರತಿಜ್ಞೆ ಬೋಧಿಸಿ, ಮುಖ್ಯ ವಿಚಾರಣೆಗೆ ಸಹಾಯಕ ಸರ್ಕಾರಿ ಅಭಿಯೋಜಕರಿಂದ "ನಾನು ಕಳೆದ 28–10–2009ರಿಂದ ವಲಯ ಅರಣ್ಯಾಧಿಕಾರಿಯಾಗಿ ಆನವಟ್ಟಿ ವಲಯದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದೇನೆ. ದಿ: 24–11–2010ರಂದು ನಾನು ನನ್ನ ಸಿಬ್ಬಂದಿಗಳೊಂದಿಗೆ ಇಲಾಖಾ ಜೀಪಿನಲ್ಲಿ ಗಸ್ತು ಮಾಡುತ್ತಾ ಬೆಟ್ಟದಕುರ್ಲಿಯಿಂದ ತುಡ್ನೂರು ಕಡೆ ಬರುತ್ತಿರುವಾಗ ಬೆ., 1–00 ಗಂಟೆ ಸಮಯದಲ್ಲಿ ಎದುರುಗಡೆಯಿಂದ ಒಂದು ವಾಹನ ಬರುತ್ತಿದ್ದು, ಅದನ್ನು ಪರಿಶೀಲಿಸಲು ನಿಲ್ಲಿಸುವಂತೆ ಬ್ಯಾಟರಿ ಸಹಾಯದಿಂದ ಸೂಚನೆ ಕೊಟ್ಟರೂ ಅದರ ಚಾಲಕ ಅದನ್ನು ನಿಲ್ಲಿಸದೇ ವೇಗವಾಗಿ ಮುಂದುವರೆದಿದ್ದು, ನಾವು ಅದನ್ನು ಬೆನ್ನತ್ತಿದ್ದಾಗ ಸದರಿ ವಾಹನವು ನೆಗವಾಡಿ ಹೋಗುವ ರಸ್ತೆಯಲ್ಲಿ ಹೋಗುತ್ತಿದ್ದು, ಪುನ: ಆನವಟ್ಟಿ ಕಡೆ ತಿರುಗಿ ಚಿಕ್ಕಚೌಟಿ ಕ್ರಾಸ್ ಬಳಿ ತಿರುಗಿಸುತ್ತಿದ್ದಾಗ ನಾವು ಹಿಂದೆ ಬರುತ್ತಿದ್ದರಿಂದ ಅಲ್ಲಿಯೇ ನಿಲ್ಲಿಸಿ ಅದರಲ್ಲಿದ್ದ 2 ಜನ ವ್ಯಕ್ತಿಗಳು ಓಡಿ ಹೋದರು. ಅವರನ್ನು ಹಿಡಿಯಲು ಪ್ರಯತ್ನಿಸಿದರೂ ಸಿಗಲಿಲ್ಲ. ನಂತರ ವಾಹನವನ್ನು ಪರಿಶೀಲಿಸಲಾಗಿ ಅದು PIAAGIO ಆಗಿದ್ದು, ಅದರಲ್ಲಿ ಹಸಿ 5 ಸಿಪ್ಪೆ ಸಮೇತ ಸಾಗುವಾನಿ ತುಂಡುಗಳಿದ್ದವು. ಈ ತುಂಡುಗಳನ್ನು ಅಳತೆ ಮಾಡಿ, ಕ್ರಮ ಸಂಖ್ಯೆ ಕೊಟ್ಟು ಸದರಿ ವಾಹನ ಮತ್ತು ತುಂಡುಗಳನ್ನು ಅಮಾನತ್ತುಪಡಿಸಿಕೊಂಡು ಮಹಜರ್ ಬರೆಯಲಾಯ್ತು. ತುಂಡುಗಳಿಗೆ ಇಲಾಖಾ ಛಾಪಾ ಹೊಡೆಯಲಾಯಿತು. ವಾಹನ ಮತ್ತು ತುಂಡುಗಳನ್ನು ಕಛೇರಿಗೆ ಸಾಗಿಸಲಾಯಿತು. ಮುಂದಿನ ತನಿಖೆಯನ್ನು ವನಪಾಲಕರಿಗೆ ವಹಿಸಿದೆನು. ಸ್ಥಳದಲ್ಲಿ ಮಾಡಿದ ಮಹಜರನ್ನು ಈಗ ನೋಡುತ್ತಿದ್ದು, ಅದನ್ನು ನಿಶಾನೆ ಪಿ1 ಎಂದು, ಅದರಲ್ಲಿನ ನನ್ನ ಸಹಿಯನ್ನು 1ಎ ಎಂದು ಗುರ್ತಿಸಿದೆ. ನಂತರ ಮರದ ತುಂಡುಗಳ ಬುಡಗಳನ್ನು ಪತ್ತೆ ಮಾಡಲಾಗಿ ಅದು ಬೆಟ್ಟದಕುರ್ಲಿ ಸರ್ವೆ ನಂಬರ್ 1ರಲ್ಲಿ ಸಾಗುವಾನಿ ನೆಡುತೋಪಿನಲ್ಲಿ 2 ಮರಗಳನ್ನು ಕಡಿದಿರುವುದು ಕಂಡು ಬಂತು. ಮರದ ಬುಡ ಮತ್ತು ತುಂಡುಗಳಿಗೆ ಹೊಂದಾಣಿಕೆಯಾಗಿರುತ್ತದೆ. ಬುಡಕ್ಕೆ ಕ್ರಮ ಸಂಖ್ಯೆ ಕೊಟ್ಟು ಛಾಪಾ ಹೊಡೆದು ಮಹಜರ್ ಬರೆಯಲಾಯಿತು. ಮರದ ಬುಡದ ಮಾಡಿದ ಮಹಜರ್ ಈಗ ನೋಡುತ್ತಿದ್ದು ಅದನ್ನು ನಿಶಾನೆ ಪಿ2 ಎಂದು ಗುರುತಿಸಿದೆ. ಅದರಲ್ಲಿಯ ನನ್ನ ಸಹಿಯನ್ನು 2ಎ ಎಂದು ಗುರುತಿಸಿದೆ. ಉಪ ಅರಣ್ಯ ಸಂರಕ್ಷಣಾದಿಕಾರಿಗಳ ಅನುಮತಿ ಮೇರೆಗೆ ಸರ್ಕಾರಿ ನಾಟಾ ಸಂಗ್ರಹಾಲಯಕ್ಕೆ ವಾಹನವನ್ನು ಸಾಗಿಸಲಾಯಿತು. ವಿಚಾರಣಾ ವರದಿಯನ್ನು ನಾನೇ ತಯಾರಿಸಿದ್ದು ಅದನ್ನು ಈಗ ನೋಡುತ್ತಿದ್ದು ಅದನ್ನು ನಿಪಿ3 ಎಂದು ಹಾಗೂ ಅದರಲ್ಲಿನ ನನ್ನ ಸಹಿಯನ್ನು 3ಎ ಎಂದು ಗುರುತಿಸಿದೆ. ಸದರಿ ವಾಹನವನ್ನು ಅರಣ್ಯ ಉತ್ಪನ್ನಗಳ ಅಕ್ರಮ ಸಾಗಾಣಿಕೆಗೆ ಉಪಯೋಗಿಸಿರುವುದರಿಂದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರುತ್ತೇನೆ."

ಪ್ರಾಸಿಕ್ಯೂಶನ್ ಸಾಕ್ಷಿಗೆ ಪಾಟಿ ಸವಾಲಿಗೆ ಡಿಫೆನ್ಸ್ ಕಡೆಯ ವಕೀಲರಿಗೆ ದಿ:19–11–2011, 31–12–2011, 07–01–2012, 03–03–2012, 07–04–2012, 21–04–2012, 07–07–2012 ಡಿಫೆನ್ಸ್ ಕಡೆ ಸಾಕ್ಷಿಗೆ ಹೇಳಲು ದಿ:18–08–2012 ಮತ್ತು ವಾದ ಮಂಡಿಸಲು ದಿ:28–08–2012ರಂದು ದಿನಾಂಕವನ್ನು ನಿಗದಿಪಡಿಸಲಾಗಿತ್ತು. ಆದರೆ ಸದರಿ ದಿನಾಂಕಗಳಂದು ಡಿಫೆನ್ಸ್ ಕಡೆಯವರು ಈ ವಾಹನದ ವಿಚಾರಣೆ ಸಮಯದಲ್ಲಿ ಹಾಜರಾಗಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:25–08–2012ರಂದು ವಾದ ಮಂಡಿಸಿ ಈ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಅಕ್ರಮವಾಗಿ ಸಾಗಾಣಿಕೆ ಮಾಡುತ್ತಿರುವಾಗ ವಲಯ ಅರಣ್ಯಾಧಿಕಾರಿ, ಆನವಟ್ಟಿ ಇವರು ಇಲಾಖಾ ಪರ ಜಪ್ತು ಮಾಡಿ ಪ್ರಥಮ ವರ್ತಮಾನ ವರದಿಯ ಮಹಜರ್ ವರದಿ, ಜಪ್ತು ವರದಿ ಮತ್ತು ವಿಚಾರಣಾ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಇದರಿಂದ ಈ ವಾಹನವನ್ನು ಅರಣ್ಯ ಉತ್ಪನ್ನವನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿರುವುದು ಸಾಬೀತಾಗಿದೆ. ಆದ್ದರಿಂದ ಈ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಲು ಕೋರಿರುತ್ತಾರೆ.

**ಈ ಪ್ರಕರಣದಲ್ಲಿ ವಾಸ್ತಾವಾಂಶ ಮತ್ತು ಕಾನೂನಿನ ವಸ್ತುಸ್ಥಿತಿ ಈ ಕೆಳಗಿನಂತಿದೆ.**

1. ಆರ್.ಸಿ. ಮಾಲೀಕರು ಈ ವಾಹನ PIAAGIO ಕೆಎ–25–ಟಿವಿ–7182ರಲ್ಲಿ ಅರಣ್ಯ ಉತ್ಪನ್ನವಾದ ಸಾಗುವಾನಿ ನಾಟಾ 05=0.481ಎಂ3ನ್ನು ದಿ:26–11–2010ರಂದು ಅಕ್ರಮವಾಗಿ ಸಾಗಿಸಲು ಉಪಯೋಗಿಸಲಾಗಿತ್ತೇ? ಹಾಗೂ ಈ ರೀತಿ ಸಾಗಿಸುವ ಮುಖಾಂತರ ಅರಣ್ಯ ಅಪರಾಧವೆಸಗಿ ಕರ್ನಾಟಕ ಅರಣ್ಯ ಕಾಯಿದೆ ಮತ್ತು ನಿಯಮವನ್ನು ಉಲ್ಲಂಘಿಸಲಾಗಿದೆಯೇ?
2. ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ)(1)ರ ಪ್ರಕಾರ ವಾಹನದ ಮಾಲೀಕರಿಗೆ ಕಾರಣ ಕೇಳಿ ನೋಟಿಸ್ ನೀಡಲಾಗಿದೆಯೇ? ಹಾಗೂ ಮಾಲೀಕರವರಿಗೆ ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿಕೊಳ್ಳಲು ಸಾಕಷ್ಟು ಅವಕಾಶವನ್ನು ನೀಡಲಾಗಿದೆಯೇ?
3. ವಾಹನದ ಮಾಲೀಕರು ಅಥವಾ ಅವರ ವಾಹನ ಚಾಲಕನಾಗಲೀ ಅಥವಾ ಅವರ ಪ್ರತಿನಿಧಿಯಾಗಲೀ PIAAGIO ನಲ್ಲಿ ಅಕ್ರಮವಾಗಿ ಸರ್ಕಾರದ ಸ್ವತ್ತಾದ ಸಾಗುವಾನಿ ನಾಟಾವನ್ನು ಸಾಗಿಸಲು ಶಾಮಿಲಾಗಿದ್ದಾರೆಯೇ? ಹಾಗೂ ಈ ವಾಹನವನ್ನು ಇಂತಹ ಅಕ್ರಮ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸದಂತೆ ವಾಹನದ ಮಾಲೀಕರು, ವಾಹನದ ಚಾಲಕರು ಅಥವಾ ಅವರ ಪ್ರತಿನಿಧಿಗಳು ಸಾಕಷ್ಟು ಸೂಕ್ತ ಮುನ್ನೆಚ್ಚರಿಗೆ ತೆಗೆದುಕೊಂಡಿರುತ್ತಾರೆಯೇ?
4. ತೀರ್ಮಾನಕ್ಕೆ ಬರಬಹುದಾಗಿದೆ.

**ಈ ಮೇಲಿನ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸಿ ಈ ಕೆಳಗಿನಂತೆ ತೀರ್ಮಾನಕ್ಕೆ ಬರಲಾಗಿದೆ, ಅದಕ್ಕೆ ಕಾರಣಗಳು ಈ ಕೆಳಗಿನಂತೆ ನೀಡಲಾಗಿದೆ.**

1. ಒಂದನೇ ಅಂಶಕ್ಕೆ ಹೌದು ಎಂತಲೂ

2. ಎರಡನೇ ಅಂಶಕ್ಕೆ ಹೌದು ಎಂತಲೂ

3. ಮೂರನೇ ಅಂಶದ ಮೊದಲ ಭಾಗದ ಪ್ರಶ್ನೆಗೆ ಹೌದು ಎಂತಲು ಎರಡನೇ ಭಾಗದ ಪ್ರಶ್ನೆಗೆ ಇಲ್ಲವೆಂಬುದಾಗಿರುತ್ತದೆ.

**ಅಂಶ–1:**

ದಿ:26–11–2010ರಂದು ವಲಯ ಅರಣ್ಯಾಧಿಕಾರಿ, ಆನವಟ್ಟಿ ವಲಯ ಮತ್ತು ಸಿಬ್ಬಂದಿಯವರು ಸೊರಬ ತಾಲ್ಲೂಕು ಆನವಟ್ಟಿ ಹೋಬಳಿ ಬೆಟ್ಟದಕುರ್ಲಿ ತುಡ್ನೂರು ಮಾರ್ಗವಾಗಿ ಗಸ್ತು ತಿರುಗುತ್ತಿರುವಾಗ ಬೆಳಗಿನ ಜಾವ 2.00 ಗಂಟೆ ಸಮಯದಲ್ಲಿ ಒಂದು ವಾಹನದಲ್ಲಿ ಸಾಗುವಾನಿ ನಾಟಾ

05=0.481ಎಂ3ನ್ನು ರಹದಾರಿ ಇಲ್ಲದೇ ಅಕ್ರಮವಾಗಿ ಸಾಗಿಸುತ್ತಿರುವುದನ್ನು ಪತ್ತೆ ಹಚ್ಚಿ ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 24, 62, 71(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ಕಾನೂನು ಉಲ್ಲಂಘಿಸಿರುವುದರಿಂದ ಆನವಟ್ಟಿ ವಲಯದ ಅ.ಮೊ.ಸಂಖ್ಯೆ:93/10–11ನ್ನು ದಾಖಲಿಸಿ, ವಾಹನ ಮತ್ತು ಅದರಲ್ಲಿದ್ದ ಅರಣ್ಯ ಉತ್ಪನ್ನವನ್ನು ಇಲಾಖಾ ಪರ ಜಫ್ತು ಮಾಡಿ ಸ್ಥಳದಲ್ಲಿ ಮಾಡಿದ ಮಹಜರ್ ಪ್ರತಿ, ಜಫ್ತು ವರದಿ ಮತ್ತು ವಿಚಾರಣಾ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಆದ್ದರಿಂದ ಈ ವಾಹನದಲ್ಲಿ ಅಕ್ರಮವಾಗಿ ಅರಣ್ಯ ಉತ್ಪನ್ನ ಸಾಗಿಸಿ, ಕರ್ನಾಟಕ ಅರಣ್ಯ ಕಾಯಿದೆ ಮತ್ತು ಕಾನೂನನ್ನು ಉಲ್ಲಂಘಿಸಿರುತ್ತಾರೆಂದು ನನ್ನ ಉತ್ತರವಾಗಿದೆ.

**ಅಂಶ–2:**

ಆರ್.ಸಿ. ಮಾಲೀಕರಾದ ಶ್ರೀ ಆನಂದ ಬಿನ್ ಬಸವರಾಜಪ್ಪ, ನೆಹರು ನಗರ, ಆನವಟ್ಟಿ, ಸೊರಬ ತಾಲ್ಲೂಕು ಇವರು ಈ ವಾಹನವನ್ನು ಮಧ್ಯಂತರ ಅವಧಿಗೆ ಬಿಡಿಸಿಕೊಳ್ಳಲು ದಿ:24–01–2011ರಂದು ವಕೀಲರ ಮುಖಾಂತರ ಕ್ಲೇಮು ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಇವರ ಅರ್ಜಿಯನ್ನು ದಿ:29–10–2011ರಂದು ತಿರಸ್ಕರಿಸಲಾಯಿತು. ಅಲ್ಲದೇ ಈ ವಾಹನದ ಆರ್.ಸಿ.ಮಾಲೀಕರಿಗೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಬಿ)(1)ರ ಪ್ರಕಾರ ಕಾರಣಕೇಳಿ ನೋಟಿಸ್‌ನ್ನು 30 ದಿನಗಳ ಕಾಲಾವಕಾಶ ನೀಡಿ ದಿ:15–03–2011ರಂದು ನೊಂದಣಿ ಅಂಚೆ ಮೂಲಕ ಜಾರಿ ಮಾಡಿ ಸ್ವೀಕೃತಿಯನ್ನು ಅಂಚೆ ಇಲಾಖೆಯವರು ಈ ನ್ಯಾಯಾಲಯಕ್ಕೆ ಒದಗಿಸಿರುತ್ತಾರೆ.

**ಅಂಶ–3:**

ದಿ:26–11–2010ರಂದು PIAAGIO ಕೆಎ–25–ಟಿವಿ–7182ರಲ್ಲಿ ಅರಣ್ಯ ಉತ್ಪನ್ನವಾದ ಸಾಗುವಾನಿ ನಾಟಾ ಅಕ್ರಮವಾಗಿ ಸೊರಬ ತಾಲ್ಲೂಕು ಆನವಟ್ಟಿ ಹೋಬಳಿ ಬೆಟ್ಟದಕುರ್ಲಿ ತುಡ್ನೂರು ಮಾರ್ಗವಾಗಿ ಸಾಗಿಸುತ್ತಿರುವಾಗ, ವಲಯ ಅರಣ್ಯಾಧಿಕಾರಿ, ಆನವಟ್ಟಿ ವಲಯ ಮತ್ತು ಸಿಬ್ಬಂದಿಯವರು ಪತ್ತೆಹಚ್ಚಿ ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯೊಂದಿಗೆ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಅಲ್ಲದೇ ವಲಯ ಅರಣ್ಯಾಧಿಕಾರಿಯವರು ಈ ಪ್ರಕರಣದ ವಿಚಾರಣಾ ವರದಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ. ಪ್ರಾಸಿಕ್ಯೂಷನ್ ಸಾಕ್ಷಿ ಹೇಳಿಕೆಗೂ ಮತ್ತು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿದ ದಾಖಲೆಗಳಿಗೂ ಒಂದಕ್ಕೊಂದು ತಾಳೆಯಾಗಿರುತ್ತದೆ. ಈ ಪ್ರಕರಣದಲ್ಲಿ ಮೇಲಿನ ವಾಸ್ತುವಾಂಶ ಹಾಗೂ ಬಾದ್ಯತೆದಾರರು ಈ ನ್ಯಾಯಾಲಯಕ್ಕೆ ಸಲ್ಲಿಸಿದ ದಾಖಲೆಗಳ ಪ್ರಕಾರ, ಅರ್ಜಿದಾರರು ಮುಗ್ದರೆನ್ನುವುದಕ್ಕಾಗಲೀ, ವಾಹನ ಮಾಲೀಕರ ಗಮನಕ್ಕೆ ಬಾರದೇ ಈ ಕೃತ್ಯ ನಡೆದಿದೆನ್ನುವುಕ್ಕಾಗಾಲೀ, ಅಲ್ಲದೇ ಈ ಪ್ರಕರಣದಲ್ಲಿ ಆರ್.ಸಿ. ಮಾಲೀಕರು ಭಾಗಿಯಾಗಿಲ್ಲವೆನ್ನುವುದಕ್ಕಾಗಲೀ ಈ ಬಗ್ಗೆ ಯಾವುದೇ ಸಾಕ್ಷ್ಯಾಧಾರಗಳನ್ನು ವಿಚಾರಣಾ ಸಮಯದಲ್ಲಿ ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ.

ಅಲ್ಲದೇ, ವಾಹನ ಮಾಲೀಕರಾಗಲೀ, ಅವರ ಪರ ಚಾಲಕರಾಗಲೀ ಅಥವಾ ಅವರ ಪ್ರತಿನಿಧಿಗಳಾಗಲೀ ವಾಹನದಲ್ಲಿ ಕಳ್ಳ ಸಾಗಾಣಿಕೆಯಾಗದಂತೆ ಮುನ್ನಚ್ಚೆರಿಕೆ ಕ್ರಮವಹಿಸಬೇಕಾಗಿರುತ್ತದೆ. ಈ ಬಗ್ಗೆ ಗೌರವನ್ವಿತ ಮಾನ್ಯ ಉಚ್ಚ ನ್ಯಾಯಾಲಯ ಕರ್ನಾಟಕವು ಈ ಕೆಳಗಿನಂತೆ ಆದೇಶ ನೀಡಿರುತ್ತಾರೆ.

The Hon'ble high Court of Karnataka Bangalore in the case of-Ramesh N. Dixit V/S State of Karnataka, 1987 (2) Kar.L.j.Sh.N.278:ILR 1985 Kar.2571 held that *"the owners required to show under sub-section (2) of section 71-B is that he, his agent, if any and the person in charge of the vehicle (In this case the driver) each, had taken all reasonable and necessary precautions against the misusing of the vehicle and that this offence had been committed without the knowledge or connivance any of them. ……………………………………………………………………………………It is not merely enough if the truck owner says that his truck had been misused without his knowledge or connivance, but in addition he is bound to show that he had taken all reasonable and necessary precautions against such misuse".*

ಪ್ರಸ್ತುತ ಪ್ರಕರಣದಲ್ಲಿ ವಾಹನ ಮಾಲೀಕರಾಗಲೀ, ಅವರ ಪ್ರತಿನಿಧಿಗಳಾಗಲೀ ಮತ್ತು ಚಾಲಕರಾಗಲೀ ಈ ವಾಹನದಲ್ಲಿ ಅಕ್ರಮವಾಗಿ ಅರಣ್ಯ ಉತ್ಪನ್ನವನ್ನು ಸಾಗಿಸದಂತೆ ಯಾವುದೇ ಮುನ್ನೆಚ್ಚರಿಕೆ ಕ್ರಮ ತೆಗೆದುಕೊಂಡ ಬಗ್ಗೆ ವಿಚಾರಣಾ ಸಮಯದಲ್ಲಿ ಈ ನ್ಯಾಯಾಲಯಕ್ಕೆ ಸಾಭೀತುಪಡಿಸಿರುವುದಿಲ್ಲ.

**ಅಂಶ–4:**

ಈ ಮೇಲಿನ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿ ಮತ್ತು ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು, ವಾದವನ್ನು ಕೇಳಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ರವಿಶಂಕರ್ ಆರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಕಾಯಿದೆ ಪ್ರಕಾರ ವಲಯ ಅರಣ್ಯಾಧಿಕಾರಿ, ಆನವಟ್ಟಿ ವಲಯ, ಆನವಟ್ಟಿ ಇವರು ಜಪ್ತು ಮಾಡಿದ ವಾಹನ PIAAGIO (ಇಂಜಿನ್ ನಂ. POE4036378 & ಛಾಸಿಸ್ ನಂ. MBX000GBMF824998) ಮತ್ತು ಈ ವಾಹನದಲ್ಲಿದ್ದ ಸಾಗುವಾನಿ ನಾಟಾ 05=0.481ಎಂ3ನ್ನು ಸರ್ಕಾರಕ್ಕೆ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ **ದಿ: 01–09–2012** ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30(ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ

ಉಪ ಅರಣ್ಯ ಸಂರಕ್ಷಣಾಧಿಕಾರಿ ಸಾಗರ ವಿಭಾಗ, ಸಾಗರ.

**PR.13**

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ

**ಬಿ3:ಅಮೊ:ವಾಹನ:ವಿವ:34/11-12, ದಿನಾಂಕ: 06-10-2012**

**ಉಪಸ್ಥಿತರು** :: ಆರ್.ರವಿಶಂಕರ್, ಭಾ.ಅ.ಸೇ.,ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಫಿರ್ಯಾಧಿದಾರರು** :: ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ, (ಸಹಾಯಕ ಸರ್ಕಾರಿ ಅಭಿಯೋಜಕರು)

**ಬಾಧ್ಯತೆದಾರರು** :: ಯಾರು ಕ್ಲೇಮು ಅರ್ಜಿ ಸಲ್ಲಿಸಿರುವುದಿಲ್ಲ.

**ಪ್ರಸ್ತಾವನೆ:-**

ದಿ:27-11-2011ರಂದು ಮಾರುತಿ ವ್ಯಾನ್ ಜಿಎ-09-ಎ-0212ರಲ್ಲಿ ಬೀಟೆ ನಾಟಾ ಅಕ್ರಮವಾಗಿ ಸಾಗಿಸುತ್ತಿರುವಾಗ ಸಾಲೂರು ಶಾಖೆಯ ವನಪಾಲಕ ಪತ್ತೆಹಚ್ಚಿ ಬರೆದ ಮಹಜರ್ ಈ ಕೆಳಗಿನಂತಿದೆ.

ದಿ:27-11-2011 ರಂದು ಅಂಬ್ಲಿಗೊಳ ವಲಯದ ಸಾಲೂರು ಶಾಖೆಯ ವನಪಾಲಕ ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಶಿಕಾರಿಪುರ ತಾ. ಅಂಜನಾಪುರ ಹೋಬಳಿ, ಸಾಲೂರು ಗ್ರಾಮದ ಸಾಲೂರಿನಿಂದ ಅರಶಿನಗೆರೆಗೆ ಹೋಗುವ ರಸ್ತೆಯಲ್ಲಿ ಕಾಯುತ್ತಿರುವಾಗ ಬೆಳಗಿನ ಜಾವ 4.45ರ ಸಮಯದಲ್ಲಿ ಚಿಕ್ಕ ಸಾಲೂರು ಕಡೆಯಿಂದ ಒಂದು ಮಾರುತಿ ವ್ಯಾನ್ ಬರುತ್ತಿರುವುದನ್ನು ಬ್ಯಾಟರಿ ಬೆಳಕಿನ ಸಹಾಯದಿಂದ ನಿಲ್ಲಿಸಲು ಸೂಚಿಸಿದಾಗ ಇಲಾಖೆಯವರಿಗಿಂತ ಸ್ವಲ್ಪ ದೂರ ವಾಹನ ನಿಲ್ಲಿಸಿ, ವಾಹನದಲ್ಲಿದ್ದ ಎರಡು ಜನ ಆಸಾಮಿಗಳು ವಾಹನದಿಂದ ಇಳಿದು ಹೊಲದೊಳಗೆ ಓಡಿ ಕೈಗೆ ಸಿಗದೇ ಪರಾರಿಯಾದರು. ನಂತರ ವಾಹನ ಪರಿಶೀಲಿಸಲಾಗಿ ಅದು ಮಾರುತಿ ವ್ಯಾನ್ ಜಿಎ-09-ಎ-0212 ಆಗಿದ್ದು, ಈ ವಾಹನದೊಳಗಡೆ ಹಸಿಯಾದ 10 ಬೀಟೆ ನಾಟಾಗಳಿದ್ದು, ಅವುಗಳನ್ನು ಅಳತೆ ಮಾಡಲಾಗಿ 0.469ಎಂ3 ಪ್ರಮಾಣವಿರುತ್ತದೆ. ಈ ತುಂಡುಗಳ ಮೇಲೆ ಇಲಾಖಾ ಛಾಪಾದ ಗುರುತಿರಲಿಲ್ಲ ಹಾಗೂ ಸಾಗಿಸಲು ರಹದಾರಿ ಇರಲಿಲ್ಲವಾದ್ದರಿಂದ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತು ವರದಿಯೊಂದಿಗೆ ಇಲಾಖಾ ಪರ ವಶಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 24, 62, 71(ಎ), 80, 104(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ಸಾಲೂರು ಶಾಖೆ ವನಪಾಲಕರು ಅರಣ್ಯ ಮೊಕದ್ದಮೆ ಸಂಖ್ಯೆ:64/11-12ನ್ನು ದಾಖಲಿಸಿರುತ್ತಾರೆ. ನಂತರ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ.

ನಂತರ ಈ ವಾಹನ ಮತ್ತು ಎಲ್ಲಾ ದಾಖಲೆಗಳನ್ನು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುತ್ತಾರೆ. ಈ ವಾಹನವನ್ನು ಸಾಗರದ ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿದೆ.

ಈ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟ್‌ನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಈ ನ್ಯಾಯಾಲಯದಿಂದ ಬಿ3-ಅಮೊ-ವಾಹನ-ವಿವ-34/11-12 ದಿ:30-11-2011ರಂದು "The Director of Transport Commission, Panaji, Goa" ಇವರಿಗೆ ಪತ್ರ ಬರೆದು ಕೋರಲಾಯಿತು. ಆದರೆ ಸಾರಿಗೆ ಅಧಿಕಾರಿ, ಗೋವಾ ಇವರು ಈ ನ್ಯಾಯಾಲಯಕ್ಕೆ ಈ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟ್‌ನ್ನು ಇಲ್ಲಿಯವರೆಗೆ ಒದಗಿಸಿರುವುದಿಲ್ಲ. ಇದರಿಂದ ಈ ವಾಹನದ ಆರ್.ಸಿ.ಮಾಲೀಕರಿಗೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಬಿ)(I)ರ ಪ್ರಕಾರ ನೋಟೀಸ್ ಜಾರಿ ಮಾಡಲು ಸಾಧ್ಯವಾಗಿರುವುದಿಲ್ಲ.

ಈ ನಡುವೆ ಈ ವಾಹನದ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ಬಿ3-ಅಮೊ-ವಾಹನ-ಪ್ರಕಟಣೆ-ಸಿಆರ್-33/11-12 ದಿ:17-01-2012ರಂದು ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಮತ್ತು ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ಗೆಜೆಟ್ ಮತ್ತು ದಿನಪತ್ರಿಕೆಯಲ್ಲಿ ಪ್ರಕಟಿಸಲು ಕೋರಲಾಯಿತು. ಅದರಂತೆ, ದಿ:04-02-2012ರಂದು ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಹಾಗೂ ದಿ:22-03-2012 ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಈ ಪ್ರಕಟಣೆಯು ಪ್ರಕಟಗೊಂಡಿರುತ್ತದೆ. ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ವಾಹನ ಮಾಲೀಕರಾಗಲೀ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿ:01-09-2012ರಂದು ವಾದ ಮಂಡಿಸಿ, ಸದರಿ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಸಾಗಿಸುತ್ತಿರುವಾಗ ಮಾಲು ಸಹಿತ ಸಾಲೂರು ಶಾಖಾ ವನಪಾಲಕರು ಮತ್ತು ಸಿಬ್ಬಂದಿಯವರು ಪತ್ತೆಹಚ್ಚಿ ಕ್ರಿಮಿನಲ್ ಕೇಸ್ ದಾಖಲಿಸಿರುತ್ತಾರೆ. ಕೇಸ್ ದಾಖಲಿಸಿದ ಬಗ್ಗೆ ಪ್ರಥಮ ವರ್ತಮಾನ ವರದಿ, ಜಫ್ತು ವರದಿಯನ್ನು ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ ಇವರು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಇದರಿಂದ ಈ ವಾಹನದಲ್ಲಿ ಬೀಟೆ ನಾಟಾಗಳನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ. ಹಾಗೂ ಈ ವಾಹನದ ಬಗ್ಗೆ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ರಾಜ್ಯ ಗೆಜೆಟ್‌ನಲ್ಲಿ ಮತ್ತು ದಿನಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದ್ದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಆರ್.ರವಿಶಂಕರ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಅರಣ್ಯ ಮೊಕದ್ದಮೆಯಲ್ಲಿ ಜಪ್ತು ಮಾಡಿದ ವಾಹನ ಮಾರುತಿ ವ್ಯಾನ್

ಜಿಎ–09–ಎ–0212 (ಛಾಸ್ಸಿಸ್ ನಂ ST–91–IN–174051 &, ಇಂಜಿನ್ ನಂ: 041096) ವನ್ನು ಮತ್ತು ಈ ವಾಹನದಲ್ಲಿದ್ದ, ಬೀಟೆ ನಾಟಾ 10=0.469ಎಂ3ನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ **ದಿ:06–10–2012** ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ

**PR.24** ಉಪ ಅರಣ್ಯ ಸಂರಕ್ಷಣಾಧಿಕಾರಿ ಸಾಗರ ವಿಭಾಗ, ಸಾಗರ.

## ಇಂಧನ ಸಚಿವಾಲಯ

### ಸಂಖ್ಯೆ: ಇಎನ್ 127 ಸಮನ್ವಯ 2012, ಬೆಂಗಳೂರು, ದಿನಾಂಕ:03–10–2012

### ಅಧಿಸೂಚನೆ

ಮಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಮಂಗಳೂರು ಇದರ ಮೆಮೊರ್‍ಯಾಂಡಮ್ ಆಫ್ ಅಸೋಸಿಯೇಷನ್ ಮತ್ತು ಆರ್ಟಿಕಲ್ಸ್ ಆಫ್ ಅಸೋಸಿಯೇಷನ್‌ನ ಆರ್ಟಿಕಲ್ 74 (ಎ) ಮತ್ತು (ಬಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ಸುಮಂತ್, ನಿರ್ದೇಶಕರು (ಪ್ರಸರಣ), ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಬೆಂಗಳೂರು ಇವರನ್ನು ಮಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಮಂಗಳೂರು ಇದರ ವ್ಯವಸ್ಥಾಪಕ ನಿರ್ದೇಶಕರು ಹಾಗೂ ನಿರ್ದೇಶಕರ ಮಂಡಳಿಯ ನಿರ್ದೇಶಕರನ್ನಾಗಿ (ಶ್ರೀ ವಿಜಯನರಸಿಂಹ ಇವರ ಸ್ಥಾನದಲ್ಲಿ) ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

ಶ್ರೀ ವಿಜಯನರಸಿಂಹ, ವ್ಯವಸ್ಥಾಪಕ ನಿರ್ದೇಶಕರು, ಮಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಮಂಗಳೂರು ಇವರನ್ನು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ವಿದ್ಯುತ್ ಕಾರ್ಖಾನೆ, ಬೆಂಗಳೂರು ಈ ಹುದ್ದೆಗೆ (ಶ್ರೀ ಎಸ್.ಪ್ರತಾಪ್ ಕುಮಾರ್ ಇವರ ಸ್ಥಾನದಲ್ಲಿ) ನೇಮಿಸಲು ಇವರ ಸೇವೆಯನ್ನು ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯ ವಶಕ್ಕೆ ನೀಡಿದೆ.

ಶ್ರೀ ಎಸ್.ಪ್ರತಾಪ್ ಕುಮಾರ್, ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ವಿದ್ಯುತ್ ಕಾರ್ಖಾನೆ, ಬೆಂಗಳೂರು ಇವರ ಸೇವೆಯನ್ನು ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯಿಂದ ಹಿಂಪಡೆದು, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಬೆಂಗಳೂರು ಇದರ ಮೆಮೊರ್‍ಯಾಂಡಮ್ ಆಫ್ ಅಸೋಸಿಯೇಷನ್ ಮತ್ತು ಆರ್ಟಿಕಲ್ಸ್ ಆಫ್ ಅಸೋಸಿಯೇಷನ್ ನ ಆರ್ಟಿಕಲ್ 30 (1) (ಎ) ಮತ್ತು (ಬಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ನಿರ್ದೇಶಕರು (ಪ್ರಸರಣ) ಹಾಗೂ ನಿರ್ದೇಶಕರ ಮಂಡಳಿಯ ನಿರ್ದೇಶಕರು, ಕೆ.ಪಿ.ಟಿ.ಸಿ.ಎಲ್., ಬೆಂಗಳೂರು ಇಲ್ಲಿಗೆ (ಶ್ರೀ ಎಸ್.ಸುಮಂತ್ ಇವರ ಸ್ಥಾನದಲ್ಲಿ)ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

ಶ್ರೀ ಡಬ್ಲ್ಯೂ.ಎಂ.ಶಿವಕುಮಾರ್, ಮುಖ್ಯ ಇಂಜಿನಿಯರ್, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಪ್ರಸ್ತುತ ಮುಖ್ಯ ಇಂಜಿನಿಯರ್, (ತಾಂತ್ರಿಕ ಕೋಶ), ನಗರಾಭಿವೃದ್ಧಿ ಇಲಾಖೆ ಇಲ್ಲಿ ಕಾರ್ಯ ನಿರ್ವಹಿಸುತ್ತಿರುವ ಇವರ ಸೇವೆಯನ್ನು ನಗರಾಭಿವೃದ್ಧಿ ಇಲಾಖೆಯಿಂದ ಹಿಂಪಡೆದು, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಬೆಂಗಳೂರು ಇದರ ಮೆಮೊರ್‍ಯಾಂಡಮ್ ಆಫ್ ಅಸೋಸಿಯೇಷನ್ ಮತ್ತು ಆರ್ಟಿಕಲ್ಸ್ ಆಫ್ ಅಸೋಸಿಯೇಷನ್‌ನ ಆರ್ಟಿಕಲ್ 74 (ಎ) ಮತ್ತು (ಬಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ನಿರ್ದೇಶಕರು (ತಾಂತ್ರಿಕ) ಹಾಗೂ ನಿರ್ದೇಶಕರ ಮಂಡಳಿಯ ನಿರ್ದೇಶಕರು, ಬೆಸ್ಕಾಂ, ಬೆಂಗಳೂರು ಹುದ್ದೆಗೆ (ಶ್ರೀ ಕೆ.ರಾಮಕೃಷ್ಣ ಇವರ ಸ್ಥಾನದಲ್ಲಿ) ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

ಶ್ರೀ ಕೆ.ರಾಮಕೃಷ್ಣ, ನಿರ್ದೇಶಕರು (ತಾಂತ್ರಿಕ), ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಬೆಂಗಳೂರು ಇವರನ್ನು ಮುಖ್ಯ ಇಂಜಿನಿಯರ್ (ಟೆಂಡರ್ ಮತ್ತು ಪ್ರೊಕ್ಯೂರ್‌ಮೆಂಟ್), ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಬೆಂಗಳೂರು (ಶ್ರೀ ಜಿ.ವಿ.ಬಲರಾಂ ಇವರ ಸ್ಥಾನದಲ್ಲಿ) ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

ಶ್ರೀ ಜಿ.ವಿ.ಬಲರಾಂ, ಮುಖ್ಯ ಇಂಜಿನಿಯರ್ (ಟೆಂಡರ್ ಮತ್ತು ಪ್ರೊಕ್ಯೂರ್‌ಮೆಂಟ್), ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಬೆಂಗಳೂರು ಇವರನ್ನು ಮುಖ್ಯ ಇಂಜಿನಿಯರ್ (ತಾಂತ್ರಿಕ ಕೋಶ), ನಗರಾಭಿವೃದ್ಧಿ ಇಲಾಖೆ ಹುದ್ದೆಗೆ (ಶ್ರೀ ಡಬ್ಲ್ಯೂ.ಎಂ.ಶಿವಕುಮಾರ್ ಇವರ ಸ್ಥಾನದಲ್ಲಿ) ನೇಮಿಸಲು ಇವರ ಸೇವೆಯನ್ನು ನಗರಾಭಿವೃದ್ಧಿ ಇಲಾಖೆಯ ವಶಕ್ಕೆ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್.ನಾಗೇಂದ್ರ**

ಸರ್ಕಾರದ ಉಪ ಕಾರ್ಯದರ್ಶಿ,

**PR.1596** ಇಂಧನ ಇಲಾಖೆ.

## COMMERCIAL TAXES DEPARTMENT

### PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 12(7) OF THE KARNATAKA TAX ON ENTRY OF GOODS ACT, 1979

**Sub:** KTEG Act, 1979-clarification of rate of tax on flour milling pulveriser-reg.

**Ref:** Application dated 20-10-2012 of Sri Shaji.K.N. proprietor of M/s Lakshmi machineries, Bangalore-560058-TIN 29330739601.

In the application cited above, sri shaji.K.N.proprietor of M/s Lakshmi Machineries, No.846/2, SRS Bus Stop, Tumkur Road, peenya 1st Stage, Bangalore-560 058 has sought clarification regarding the rate of entry tax on Flour milling pulveriser.

2. Section 12(7) of the Karnataka Tax on Entry of Goods Act 1979 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence, the following clarification is issued.

**CLARIFICATION NO.KTEG/CLR/CR-16/12-13, DATED:19-01-2013**

It is clarified that 'Flour Milling pulveriser (Domestic Flour Mill)' is liable to entry tax at 2% as per Sl.No.7 of the table in the Notification No.FD 11 CET 2002 dated 30-03-2002.

**YOGENDRA TRIPATHI**
Commissioner of Commercial Taxes, (Karnataka), Bangalore.

**PR.118.**

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದ.ಕ.ಉಪವಿಭಾಗ–2, ಬೆಂದೂರ್ ವೆಲ್ ವೃತ್ತ ಕಂಕನಾಡಿ, ಮಂಗಳೂರು ಇವರ ನ್ಯಾಯಾಲಯ.

**ಸಂಖ್ಯೆ: ಡಬ್ಲ್ಯೂಸಿಎ/ಎಸ್.ಆರ್–1/2013 (ಎಫ್) ದಿನಾಂಕ: 15–01–2013**

| ಅರ್ಜಿದಾರರು: | ವಿರುದ್ಧ | ಪ್ರತಿವಾದಿಗಳು: |
|---|---|---|
| 1. ಶ್ರೀಮತಿ ರೇಣುಕಾ, ವಯಸ್ಸು 31 ವರ್ಷ ಕೋಂ: ಲೇಟ್ ತಾರಾನಾಥ<br>2. ಭವ್ಯ, ವಯಸ್ಸು 3 ವರ್ಷ, ಬಿನ್: ಲೇಟ್ ತಾರಾನಾಥ<br>3. ಶ್ರೀಮತಿ ಸರಸ್ವತಿ, ವಯಸ್ಸು 56 ವರ್ಷ ಕೋಂ: ಸುಂದರ ಮೂಲ್ಯ ವಾಸ: ಮುಗುಲ್ಯ ಹೌಸ್, ಸಜಿಪ ನಡು, ಸಜಿಪ ಅಂಚೆ, ಬಂಟ್ವಾಳ ತಾಲ್ಲೂಕು. | | 1. ಶ್ರೀ ಎಂ. ಮೊಹಮ್ಮದ್, ವಯಸ್ಕರು, ಪಿ.ಡಬ್ಲ್ಯೂ.ಡಿ ಕಂಟ್ರಾಕ್ಟರ್, ಕಬಕ, ಪುತ್ತೂರು–574220 |

**ಅಧಿಸೂಚನೆ**

ಅರ್ಜಿದಾರರಾದ ಶ್ರೀಮತಿ ರೇಣುಕಾ, ಇವರು ತನ್ನ ಗಂಡನಾದ ತಾರನಾಥ ಪ್ರತಿವಾದಿಗಳಲ್ಲಿ ಕೆಲಸಗಾರನಾಗಿದ್ದು, ಕೆಲಸದಲ್ಲಿ ನಿರತನಾಗಿದ್ದಾಗ, ದಿ:13–08–2012 ರಂದು ಅಪಘಾತಕ್ಕೀಡಾಗಿ ಮೃತರಾದನೆಂದು ತಿಳಿಸಿ, ಅವಲಂಬಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದುದರಿಂದ, ಈ ವಿಷಯದಲ್ಲಿ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆಯು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದ ಮೂವತ್ತು (30) ದಿನಗಳೊಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗಧಿತ ಸಮಯದಲ್ಲಿ ಈ ನ್ಯಾಯಾಲಯವು ಯಾವುದೇ ಕ್ಲೈಮ್ ಅರ್ಜಿ:ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ, ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

**ಎಂ. ಆನಂದ ಮೂರ್ತಿ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ದ.ಕ.ಉಪವಿಭಾಗ–2, ಮಂಗಳೂರು.

**PR.68**

## ಸಹಕಾರ ಸಂಘಗಳ ಉಪ–ನಿಬಂಧಕರು ಶಿವಮೊಗ್ಗ ಜಿಲ್ಲೆ ಸಹಕಾರ ಭವನ ಆರ್‌ಟಿಓ ಕಚೇರಿ ರಸ್ತೆ ಶಿವಮೊಗ್ಗ.

**ವಿಷಯ:–** ಸಮಾಪನೆಯಲ್ಲಿರುವ ಗ್ರಾಮಾಂತರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಆನವಟ್ಟಿ ಸೊರಬ ತಾ:,ಇದರ ನೊಂದಣಿ ಕ್ರಮಾಂಕ ರದ್ದುಪಡಿಸುವ ಬಗ್ಗೆ.

**ಉಲ್ಲೇಖ:–**
1. ಈ ಕಚೇರಿಯ ಆದೇಶ ನಂ, ಡಿಆರ್‌ಎಸ್/ ಕಾನೂನು–3/ಡಿಎಲ್‌ಎಸ್/70/2001–02 ದಿನಾಂಕ:–16–01–2002 ಮತ್ತು 27–12–2004
2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪವಿಭಾಗ ಸಾಗರರವರ ಪತ್ರನಂ:ಸನಿ–25/ಎಲ್‌ಕ್ಯೂಡಿ/ಸಿಆರ್–48/ 2007–08. ದಿನಾಂಕ:05–01–2013.
3. ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಒ 139 ಸಿಎಲ್‌ಎಂ 2011 ದಿನಾಂಕ:17–02–2011.

**ಪ್ರಸ್ತಾವನೆ:–**

ಸಮಾಪನೆಯಲ್ಲಿರುವ ಗ್ರಾಮಾಂತರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಆನವಟ್ಟಿ ಸೊರಬ ತಾ:,ಈ ಸಹಕಾರ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು ಸಾಗರರವರ ಆದೇಶ ನಂ;327/1967–68 ದಿನಾಂಕ:–27–03–1968 ರಂದು ನೊಂದಣಿಯಾಗಿರುತ್ತದೆ. ಸಂಘದ

ಕಾರ್ಯವ್ಯಾಪ್ತಿಯು ತಾಲ್ಲೂಕಿಗಿಂತ ಕಡಿಮೆ ವ್ಯಾಪ್ತಿಗೆ ಸೀಮಿತವಾಗಿರುತ್ತದೆ. ಸಹಕಾರ ಸಂಘವು ಉಪನಿಯಮಗಳ ಉದ್ದೇಶಗಳಿಗನುಗುಣವಾಗಿ ಕಾರ್ಯನಿರ್ವಹಿಸದೇ ಸ್ಥಗಿತಗೊಂಡ ಕಾರಣ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಶಿಫಾರಸ್ಸಿನ ಮೇರೆಗೆ ಉಲ್ಲೇಖ(1)ರ ಈ ಕಛೇರಿಯ ಆದೇಶದಲ್ಲಿ ಈ ಸಂಘವನ್ನು ಸಮಾಪನೆಗೊಳಿಸಲಾಗಿತ್ತು. ಉಲ್ಲೇಖ(1)ರ ಈ ಕಛೇರಿಯ ದಿನಾಂಕ:–27–12–2004 ರ ಆದೇಶದಲ್ಲಿ ಸಮಾಪನಾಧಿಕಾರಿಯಾಗಿ ನೇಮಿಸಲಾದ ಸಹಕಾರ ಅಭಿವೃದ್ದಿ ಅಧಿಕಾರಿ, ಸೊರಬ ಇವರು ದಿನಾಂಕ:05–09–2005 ರಂದು ಪ್ರಭಾರ ಪಡೆದು ಸಮಾಪನಾ ಕಾರ್ಯಕೈಗೊಂಡಿರುತ್ತಾರೆ. ದಿನಾಂಕ:07–12–2012 ರಂದು ನಡೆದ ಸಮಾಪನಾಧಿಕಾರಿಯ ಅಂತಿಮ ಸಭೆಯಲ್ಲಿ ಈ ಕಚೇರಿಯ ಆದೇಶದಲ್ಲಿ ಪಡೆದ ಅನುಮೋದನೆಯಂತೆ ಸಂಘದ ಆಸ್ತಿ–ಜವಾಬ್ದಾರಿಯನ್ನು ವಿಲೇವಾರಿ ಮಾಡಿ ಆಸ್ತಿ–ಜವಾಬ್ದಾರಿ ತ:ಖ್ತೆಯನ್ನು ಶೂನ್ಯಗೊಳಿಸಿರುತ್ತಾರೆ. ಮತ್ತು ಸಂಘದ ನೊಂದಣಿ ಕ್ರಮಾಂಕವನ್ನು ರದ್ದುಪಡಿಸಲು ತೀರ್ಮಾನಿಸಿ, ಪ್ರಸ್ತಾವನೆಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರರವರಿಗೆ ಸಲ್ಲಿಸಿರುತ್ತಾರೆ. ಸಹಕಾರ ಸಂಘಗಳ ಸಹಾಯಕ ನಿಬಂಧಕರು ಸಾಗರರವರು ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ನೊಂದಣಿ ರದ್ದುಪಡಿಸಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಈ ಕಚೇರಿಗೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದೆ ದಿನಾಂಕ:07–12–2012ರಂದು ನಡೆದ ಸಮಾಪನಾಧಿಕಾರಿ ಸಭೆಯ ನಡವಳಿಯಂತೆ ದಿನಾಂಕ:31–03–2011 ಕ್ಕೆ ಇದ್ದಂತೆ ಸಂಘದ ಆಸ್ತಿ–ಜವಾಬ್ದಾರಿ ತ:ಖ್ತೆಯಂತೆ ವಿಲೇವಾರಿ ಮಾಡಿರುತ್ತಾರೆ. ಮತ್ತು ದಿನಾಂಕ:07–12–2012 ಕ್ಕೆ ಇದ್ದಂತೆ ಆಸ್ತಿ–ಜವಾಬ್ದಾರಿಯನ್ನು ಶೂನ್ಯಗೊಳಿಸಿರುತ್ತಾರೆ. ದಿನಾಂಕ:07–12–2012ರ ಸಮಾಪನಾಧಿಕಾರಿಯ ಅಂತಿಮ ಸಭೆಯ ನಿರ್ಣಯವನ್ನು ಅಂಗೀಕರಿಸಿ, ಸಹಕಾರ ಸಂಘದ ಆಸ್ತಿ–ಜವಾಬ್ದಾರಿಗಳು ಶೂನ್ಯಗೊಳಿಸಿರುವ ಮೇರೆಗೆ ಸಂಘವನ್ನು ಮುಂದುವರೆಸುವುದರಿಂದ ಈ ಸಹಕಾರ ಸಂಘದಿಂದ ಸದಸ್ಯರಿಗಾಗಲಿ, ಸಾರ್ವಜನಿಕರಿಗಾಗಲಿ ಯಾವುದೇ ಪ್ರಯೋಜನವಿಲ್ಲ ಎಂಬುದನ್ನು ಮನಗಂಡು ಈ ಸಂಘದ ನೊಂದಣಿ ಕ್ರಮಾಂಕವನ್ನು ರದ್ದುಪಡಿಸುವುದು ಸೂಕ್ತವೆಂದು ಪರಿಗಣಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸಂಖ್ಯೆ:ಡಿಆರ್‌ಎಸ್/ಕಾನೂನು–3/ಡಿಎಲ್‌ಎಸ್70/2001–02, ದಿನಾಂಕ:31–01–2013.**

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಒ 139 ಸಿಎಲ್‌ಎಂ 2011 ದಿನಾಂಕ:17–02–2011 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, **ಅಶೋಕ. ವೆಂ.ಮೊರಬ. ಕೆ.ಸಿ.ಎಸ್. ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ** ಆದ ನಾನು **ಸಮಾಪನೆಯಲ್ಲಿರುವ ಗ್ರಾಮಾಂತರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಆನವಟ್ಟಿ ಸೊರಬ ತಾ:,** ಈ ಸಹಕಾರ ಸಂಘದ ನೊಂದಣಿ ನಂ;327/1967–68 ದಿನಾಂಕ:–27–03–1968 ನ್ನು ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿ, ಆದೇಶ ಹೊರಡಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡು ವಿಸರ್ಜಿತವಾಗಿದೆ ಎಂದು ಪರಿಗಣಿಸತಕ್ಕದ್ದು. ಈ ಸಹಕಾರ ಸಂಘಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 33 ರನ್ವಯ 3 ವರ್ಷಗಳ ಕಾಲ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪ ವಿಭಾಗ ಸಾಗರ ಇವರ ಕಾರ್ಯಾಲಯದಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿ ಮೊಹರಿನೊಂದಿಗೆ ದಿನಾಂಕ:31–01–2013. ರಂದು ನೀಡಲಾಗಿದೆ.

**ಅಶೋಕ ವೆಂ.ಮೊರಬ**
ಸಹಕಾರ ಸಂಘಗಳ ಉಪ–ನಿಬಂಧಕರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**PR.147**

## ಸಹಕಾರ ಸಂಘಗಳ ಉಪ–ನಿಬಂಧಕರು ಶಿವಮೊಗ್ಗ ಜಿಲ್ಲೆ ಸಹಕಾರ ಭವನ ಆರ್‌ಟಿಓ ಕಚೇರಿ ರಸ್ತೆ ಶಿವಮೊಗ್ಗ.

**ವಿಷಯ:–** ಸಮಾಪನೆಯಲ್ಲಿರುವ ಟೈಲರ್ಸ್ ಸಹಕಾರ ಸಂಘ (ನಿ) ಸಾಗರ ಇದರ ನೊಂದಣಿ ಕ್ರಮಾಂಕ ರದ್ದುಪಡಿಸುವ ಬಗ್ಗೆ.

**ಉಲ್ಲೇಖ:–**
1. ಈ ಕಚೇರಿಯ ಆದೇಶ ನಂ:–ಡಿಆರ್‌ಎಸ್/ಕಾನೂನು–3/ ಡಿಎಲ್‌ಎಸ್/21/1999–2000 ದಿನಾಂಕ 30–07–1999.
2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪವಿಭಾಗ ಸಾಗರರವರ ಪತ್ರನಂ:ಸನಿ–25/ಎಲ್‌ಕ್ಯೂಡಿ ಕೈಮಇ168/ 2011–12. ದಿನಾಂಕ:05–01–2013.
3. ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಒ 139 ಸಿಎಲ್‌ಎಂ 2011 ದಿನಾಂಕ:17–02–2011.

**ಪ್ರಸ್ತಾವನೆ:–**

ಸಮಾಪನೆಯಲ್ಲಿರುವ ಟೈಲರ್ಸ್ ಸಹಕಾರ ಸಂಘ (ನಿ) ಸಾಗರ ಈ ಸಹಕಾರ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು ಸಾಗರರವರ ಆದೇಶ ಸಂ:ಎಆರ್‌ಎಸ್/ಆರ್‌ಎಸ್‌ಆರ್–1/ಆರ್‌ಜಿಎನ್/7519/1979–80.ದಿನಾಂಕ:–22–05–1980 ರಂದು ನೊಂದಣಿಯಾಗಿರುತ್ತದೆ. ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕಿಗಿಂತ ಕಡಿಮೆ ವ್ಯಾಪ್ತಿಗೆ ಸೀಮಿತವಾಗಿರುತ್ತದೆ. ಸಹಕಾರ ಸಂಘವು ಉಪನಿಯಮಗಳ ಉದ್ದೇಶಗಳಿಗನುಗುಣವಾಗಿ ಕಾರ್ಯನಿರ್ವಹಿಸದೇ ಸ್ಥಗಿತಗೊಂಡ ಕಾರಣ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ರವರ ಶಿಫಾರಸ್ಸಿನ ಮೇರೆಗೆ ಉಲ್ಲೇಖ(1)ರ ಈ ಕಛೇರಿಯ ಆದೇಶದಲ್ಲಿ ಈ ಸಂಘವನ್ನು ಸಮಾಪನೆಗೊಳಿಸಲಾಗಿತ್ತು. ಸಮಾಪನಾಧಿಕಾರಿಯಾಗಿ ನೇಮಿಸಲಾದ ಸಹಕಾರ ಸಂಘಗಳ ನಿರೀಕ್ಷಕರು ಸಾಗರ ಇವರು ದಿನಾಂಕ:10–12–1999 ರಂದು ಪ್ರಭಾರ ಪಡೆದು ಸಮಾಪನಾ ಕಾರ್ಯಕೈಗೊಂಡಿರುತ್ತಾರೆ. ದಿನಾಂಕ:29–12–2012 ರಂದು ನಡೆದ ಸಮಾಪನಾಧಿಕಾರಿಯ ಅಂತಿಮ ಸಭೆಯಲ್ಲಿ ಈ ಕಚೇರಿಯ ಆದೇಶದಲ್ಲಿ ಪಡೆದ ಅನುಮೋದನೆಯಂತೆ ಸಂಘದ ಆಸ್ತಿ–ಜವಾಬ್ದಾರಿಯನ್ನು ವಿಲೇವಾರಿ ಮಾಡಿ ಆಸ್ತಿ–ಜವಾಬ್ದಾರಿ ತ:ಖ್ತೆಯನ್ನು ಶೂನ್ಯಗೊಳಿಸಿರುತ್ತಾರೆ. ಮತ್ತು ಸಂಘದ ನೊಂದಣಿ ಕ್ರಮಾಂಕವನ್ನು ರದ್ದುಪಡಿಸಲು ತೀರ್ಮಾನಿಸಿ, ಪ್ರಸ್ತಾವನೆಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರರವರಿಗೆ ಸಲ್ಲಿಸಿರುತ್ತಾರೆ. ಸಹಕಾರ ಸಂಘಗಳ ಸಹಾಯಕ ನಿಬಂಧಕರು ಸಾಗರರವರು ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ನೊಂದಣಿ ರದ್ದುಪಡಿಸಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಈ ಕಚೇರಿಗೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದೆ ದಿನಾಂಕ:29–12–2012ರಂದು ನಡೆದ ಸಮಾಪನಾಧಿಕಾರಿ ಸಭೆಯ ನಡವಳಿಯಂತೆ ದಿನಾಂಕ:31–03–2011 ಕ್ಕೆ ಇದ್ದಂತೆ ಸಂಘದ ಆಸ್ತಿ–ಜವಾಬ್ದಾರಿ ತ:ಖ್ತೆಯಂತೆ ವಿಲೇವಾರಿ ಮಾಡಿರುತ್ತಾರೆ. ಮತ್ತು ದಿನಾಂಕ:29–12–2012 ಕ್ಕೆ ಇದ್ದಂತೆ ಆಸ್ತಿ–

ಜವಾಬ್ದಾರಿಯನ್ನು ಶೂನ್ಯಗೊಳಿಸಿರುತ್ತಾರೆ. ದಿನಾಂಕ:29–12–2012 ರ ಸಮಾಪನಾಧಿಕಾರಿಯ ಅಂತಿಮ ಸಭೆಯ ನಿರ್ಣಯವನ್ನು ಅಂಗೀಕರಿಸಿ ಸಹಕಾರ ಸಂಘದ ಆಸ್ತಿ–ಜವಾಬ್ದಾರಿಗಳು ಶೂನ್ಯಗೊಳಿಸಿರುವ ಮೇರೆಗೆ ಸಂಘವನ್ನು ಮುಂದುವರೆಸುವುದರಿಂದ ಈ ಸಹಕಾರ ಸಂಘದಿಂದ ಸದಸ್ಯರಿಗಾಗಲಿ, ಸಾರ್ವಜನಿಕರಿಗಾಗಲಿ ಯಾವುದೇ ಪ್ರಯೋಜನವಿಲ್ಲ ಎಂಬುದನ್ನು ಮನಗಂಡು ಈ ಸಂಘದ ನೊಂದಣಿ ಕ್ರಮಾಂಕವನ್ನು ರದ್ದುಪಡಿಸುವುದು ಸೂಕ್ತವೆಂದು ಪರಿಗಣಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸಂ:ಡಿಆರ್‌ಎಸ್/ಕಾನೂನು–3/ಡಿಎಲ್‌ಎಸ್/21/1999–2000 ದಿನಾಂಕ:31–01–2013.**

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಒ 139 ಸಿಎಲ್‌ಎಂ 2011 ದಿನಾಂಕ:17–02–2011 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, **ಅಶೋಕ. ವೆಂ.ಮೊರಬ. ಕೆ.ಸಿ.ಎಸ್. ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ** ಆದ ನಾನು **ಸಮಾಪನೆಯಲ್ಲಿರುವ ಟೈಲರ್ಸ್ ಸಹಕಾರ ಸಂಘ (ನಿ) ಸಾಗರ** ಈ ಸಹಕಾರ ಸಂಘದ ನೊಂದಣಿ ಸಂ:ಎಆರ್‌ಎಸ್/ಆರ್‌ಎಸ್‌ಆರ್–1/ಆರ್‌ಜಿಎನ್/7519/1979–80.ದಿನಾಂಕ:–22–05–1980ನ್ನು ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿ, ಆದೇಶ ಹೊರಡಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡು ವಿಸರ್ಜಿತವಾಗಿದೆ ಎಂದು ಪರಿಗಣಿಸತಕ್ಕದ್ದು. ಈ ಸಹಕಾರ ಸಂಘಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 33 ರನ್ವಯ 3 ವರ್ಷಗಳ ಕಾಲ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪ ವಿಭಾಗ ಸಾಗರ ಇವರ ಕಾರ್ಯಾಲಯದಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿ ಮೊಹರಿನೊಂದಿಗೆ ದಿನಾಂಕ:31–01–2013. ರಂದು ನೀಡಲಾಗಿದೆ.

**ಅಶೋಕ ವೆಂ.ಮೊರಬ**
ಸಹಕಾರ ಸಂಘಗಳ ಉಪ–ನಿಬಂಧಕರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**PR.145**

**ಸಹಕಾರ ಸಂಘಗಳ ಉಪ–ನಿಬಂಧಕರು ಶಿವಮೊಗ್ಗ ಜಿಲ್ಲೆ ಸಹಕಾರ ಭವನ ಆರ್‌ಟಿಓ ಕಚೇರಿ ರಸ್ತೆ ಶಿವಮೊಗ್ಗ.**

**ವಿಷಯ:** ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ.,ದಬ್ಬಣ ಭೈರನಹಳ್ಳಿ ಶಿಕಾರಿಪುರತಾ: ಇದರ ಸಮಾಪನಾಧಿಕಾರಿ ಮರುನೇಮಕ ಮಾಡುವ ಬಗ್ಗೆ.

**ಉಲ್ಲೇಖ:**
1. ಈ ಕಚೇರಿಯ ಆದೇಶ ಸಂ: ಡಿಆರ್‌ಎಸ್/ ಎಲ್‌ಕ್ಯೂಡಿ/ ಡಿಎಲ್‌ಎಸ್/ಸಿಆರ್– /2011–12 ದಿನಾಂಕ:24–08–2011
2. ನಿರ್ವಹಕ ನಿರ್ದೇಶಕರು ಶಿವಮೊಗ್ಗ ಹಾಲು ಉತ್ಪಾದಕರ ಸಹಕಾರ ಸಂಘಗಳ ಒಕ್ಕೂಟ ನಿ.,ಮಾಚೇನಹಳ್ಳಿ ಇವರ ಪತ್ರ ಸಂಖ್ಯೆ:– ಶಿಸಹಾಒ/ಶೇಮತಾಂ/7147/2012–13 ದಿನಾಂಕ:–30–01–2013.

ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ., ದಬ್ಬಣಭೈರನಹಳ್ಳಿ ಶಿಕಾರಿಪುರ ತಾಲ್ಲೂಕು ಈ ಸಹಕಾರ ಸಂಘವನ್ನು ಉಲ್ಲೇಖ(1)ರ ಈ ಕಚೇರಿಯ ಆದೇಶದಲ್ಲಿ ಸಮಾಪನೆಗೊಳಿಸಿ, ಸಹಾಯಕ ವ್ಯವಸ್ಥಾಪಕ, ಶಿಮೂಲ್ ಶಿಕಾರಿಪುರ ವೃತ್ತ ಶಿಕಾರಿಪುರರವರನ್ನು ಸಮಾಪನಾಧಿಕಾರಿಯಾಗಿ ನೇಮಿಸಿ ಆದೇಶಿಸಲಾಗಿತ್ತು. ಸದರಿಯವರು ಸಂಘದ ಪ್ರಭಾರ ಪಡೆದಿರುವುದಿಲ್ಲ. ಉಲ್ಲೇಖ (2) ರ ಪತ್ರದಲ್ಲಿ ನಿರ್ವಹಕ ನಿರ್ದೇಶಕರು ಶಿಮೂಲ್ ಈಗಾಗಲೇ ನೇಮಕ ಮಾಡಿರುವ ಸಮಾಪನಾಧಿಕಾರಿಗಳು ದಿನಾಂಕ:–31–01–2013 ರಂದು ವಯೋನಿವೃತಿ ಹೊಂದಲಿದ್ದಾರೆ ಎಂದು ತಿಳಿಸಿ, ಶ್ರೀ ರಾಮು ವಿಸ್ತರಣಾಧಿಕಾರಿಗಳು ಶಿಮೂಲ್ ಶಿಕಾರಿಪುರ ಇವರನ್ನು ನೇಮಿಸಲು ಕೋರಿರುತ್ತಾರೆ. ಆದ್ದರಿಂದ ದಿನಾಂಕ:–07–02–2013. ರಂದು ನಡೆದ ಸಮಾಪನಾಧಿಕಾರಿಗಳ ಪ್ರಗತಿ ಪರಿಶೀಲನಾ ಸಭೆಯಲ್ಲಿ ಈ ಬಗ್ಗೆ ಚರ್ಚಿಸಿ ಆಡಳಿತಾತ್ಮಕ ಹಿತದೃಷ್ಠಿಯಿಂದಾ ಸಮಾಪನಾಧಿಕಾರಿಯಾಗಿ ಶ್ರೀ ರಾಮು ವಿಸ್ತರಣಾಧಿಕಾರಿಗಳು ಶಿಮೂಲ್ ಶಿಕಾರಿಪುರರವರಿಗೆ ಬದಲಾವಣೆ ಮಾಡಲು ತೀರ್ಮಾನಿಸಲಾಗಿದೆ.

ಆದ್ದರಿಂದ ಈ ಸಹಕಾರ ಸಂಘದ ಸಮಾಪನಾಧಿಕಾರಿಯಾಗಿ ಶ್ರೀ ರಾಮು ವಿಸ್ತರಣಾಧಿಕಾರಿಗಳು ಶಿಮೂಲ್ ಶಿಕಾರಿಪುರರವರನ್ನು ಮರುನೇಮಕ ಮಾಡಲು ಈ ಕೆಳಕಂಡ ಆದೇಶ ಹೊರಡಿಸಿದೆ.

**ಸಂ:ಡಿಆರ್‌ಎಸ್/ಎಲ್‌ಕ್ಯೂಡಿ/ಡಿಎಲ್‌ಎಸ್/ಸಿಆರ್– /2011–12 ದಿನಾಂಕ:08–02–2013.**

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73(1) ರನ್ವಯ ಮತ್ತು ಕರ್ನಾಟಕ ಸರ್ಕಾರದ ಅಧಿಸೂಚನೆ ನಂ:ಸಿಒ 139 ಸಿಎಲ್‌ಎಂ 2010 ದಿನಾಂಕ:17–02–2011ರಲ್ಲಿ ದತ್ತವಾದ ಅಧಿಕಾರದನ್ವಯ, ಅಶೋಕ ವೆಂ.ಮೊರಬ, ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ.,ದಬ್ಬಣಭೈರನಹಳ್ಳಿ ಶಿಕಾರಿಪುರತಾ: ಈ ಸಂಘದ ಸಮಾಪನಾಧಿಕಾರಿಯಾಗಿ ಶ್ರೀ ರಾಮು ವಿಸ್ತರಣಾಧಿಕಾರಿಗಳು ಶಿಮೂಲ್ ಶಿಕಾರಿಪುರರವರನ್ನು ನೇಮಕ ಮಾಡಿರುತ್ತೇನೆ. ಸಮಾಪನಾಧಿಕಾರಿಯವರು ಕೂಡಲೇ ಸಂಘದ ಪ್ರಭಾರವನ್ನು ಪಡೆದು ಬಾಕಿ ಇರುವ ಸಮಾಪನಾ ಕಾರ್ಯವನ್ನು ಪೂರ್ಣಗೊಳಿಸಿ, ಸಂಘದ ನೊಂದಣಿ ರದ್ಧತಿಗೆ ಪ್ರಸ್ತಾವನೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ದಿನಾಂಕ 08–02–2013.ರಂದು ಸ್ವಸಹಿ ಮತ್ತು ಕಛೇರಿ ಮೊಹರಿನೊಂದಿಗೆ ಹೊರಡಿಸಲಾಗಿದೆ.

**ಅಶೋಕ ವೆಂ.ಮೊರಬ**
ಸಹಕಾರ ಸಂಘಗಳ ಉಪ–ನಿಬಂಧಕರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**PR.146**

**ಸಹಕಾರ ಸಂಘಗಳ ಉಪ–ನಿಬಂಧಕರು ಶಿವಮೊಗ್ಗ ಜಿಲ್ಲೆ ಸಹಕಾರ ಭವನ ಆರ್‌ಟಿಓ ಕಚೇರಿ ರಸ್ತೆ ಶಿವಮೊಗ್ಗ.**

**ವಿಷಯ:–** ನಿಷ್ಕ್ರಿಯಗೊಂಡಿರುವ ಮೆಗ್ಗಾನ್ ಆಸ್ಪತ್ರೆ ಸಹಕಾರ ಸಂಘ ನಿ.,ಶಿವಮೊಗ್ಗ ಇದನ್ನು ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:–** 1)ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗರವರ ಪತ್ರ ಸಂ: ಸನಿಶಿ24/ ಸಮಾಪನೆ/ ಸಿಆರ್–37/2012–13 ದಿನಾಂಕ:–08–01–2013.

2)ವಿಶೇಷಧಿಕಾರಿಯವರ ಪತ್ರ ಸಂಖ್ಯೆ: ವಿಅ/ ಸಮಾಪನೆ/ ಸಿಆರ್–/2012–13 ದಿನಾಂಕ:03–01–2013

**ಪ್ರಸ್ತಾವನೆ:–**

ನಿಷ್ಕ್ರಿಯಗೊಂಡಿರುವ ಮೆಗ್ಗಾನ್ ಆಸ್ಪತ್ರೆ ಸಹಕಾರ ಸಂಘ ನಿ.,ಶಿವಮೊಗ್ಗ ಈ ಸಹಕಾರ ಸಂಘವು ನೊಂದಣಿ ಸಂಖ್ಯೆ:ಎಆರ್‌ಎಸ್/1026/1950–51 ದಿನಾಂಕ:29–11–1950 ರಂದು ತಾಲ್ಲೂಕು ಮಟ್ಟಕ್ಕಿಂತ ಕಡಿಮೆ ಕಾರ್ಯವ್ಯಾಪ್ತಿಯನ್ನು ಹೊಂದಿ ನೊಂದಣಿಯಾಗಿರುತ್ತದೆ. ನಂತರ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ, ನಿಯಮ ಮತ್ತು ಸಂಘದ ಉಪನಿಯಮದ ಅವಕಾಶದನ್ವಯ ಕೆಲಸ ನಿರ್ವಹಿಸದ ಕಾರಣ ಸಂಘದ ಆಡಳಿತ ಮಂಡಳಿಯನ್ನು ರದ್ದುಪಡಿಸಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರು ಶಿವಮೊಗ್ಗ ಇವರು ವಿಶೇಷಾಧಿಕಾರಿಯನ್ನು ನೇಮಕ ಮಾಡಿರುತ್ತಾರೆ. ತದನಂತರ ಸಂಘದ ಆಡಳಿತ ಮಂಡಳಿಯನ್ನು ರಚಿಸಲು ವಿಶೇಷಾಧಿಕಾರಿಯು ಪ್ರಯತ್ನಿಸಿದ್ದು, ಆಡಳಿತ ಮಂಡಳಿಯನ್ನು ರಚಿಸಿಕೊಂಡು ಸಂಘವನ್ನು ಮುನ್ನೆಡೆಸಿಕೊಂಡು ಹೋಗಲು ಯಾವುದೇ ಸದಸ್ಯರಲ್ಲಿ ಆಸಕ್ತಿ ಇಲ್ಲದೇ ಇರುವುದರಿಂದ ವಿಶೇಷಾಧಿಕಾರಿಯವರು ಉಲ್ಲೇಖ (2) ರ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಶಿವಮೊಗ್ಗ ಇವರನ್ನು ಸಂಘವನ್ನು ಸಮಾಪನೆಗೊಳಿಸಲು ಕೋರಿರುತ್ತಾರೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು ಶಿವಮೊಗ್ಗರವರು ಸಂಘವನ್ನು ಸಮಾಪನೆಗೊಳಿಸಲು ಉಲ್ಲೇಖ(1) ರ ಪತ್ರದಲ್ಲಿ ಪ್ರಸ್ತಾವನೆಯನ್ನು ಶಿಫಾರಸ್ಸು ಮಾಡಿ ಈ ಕಛೇರಿಗೆ ಸಲ್ಲಿಸಿರುತ್ತಾರೆ. ಪ್ರಸ್ತಾವನೆಯೊಂದಿಗೆ ಚೆಕ್‌ಲಿಸ್ಟ್‌ನಲ್ಲಿ ಮಾಹಿತಿ ಮತ್ತು ಸಂಘದ ಆರ್ಥಿಕ ತ:ಖ್ತೆಯನ್ನು ಸಲ್ಲಿಸಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ, ಪರಿಗಣಿಸಿ, ಈ ಕೆಳಕಂಡ ಆದೇಶ ಹೊರಡಿಸಿದೆ.

**ಸಂ:ಡಿಆರ್‌ಎಸ್/ಎಲ್‌ಕ್ಯೂಡಿ/ಡಿಎಲ್‌ಎಸ್/ಸಿಆರ್– /2012–13 ದಿನಾಂಕ:08–02–2013.**

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ಕಲಂ 72(2) ರನ್ವಯ ಮತ್ತು ಸರ್ಕಾರದ ಅಧಿಸೂಚನೆ ನಂ:ಸಿಒ/139/ಸಿಎಲ್‌ಎಂ/2011 ದಿನಾಂಕ:17–02–2011 ರನ್ವಯ ದತ್ತವಾದ ಅಧಿಕಾರದನ್ವಯ **ಅಶೋಕ. ವೆಂ.ಮೊರಬ. ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಮೆಗ್ಗಾನ್ ಆಸ್ಪತ್ರೆ ಸಹಕಾರ ಸಂಘ** ನಿ.,**ಶಿವಮೊಗ್ಗ** ಈ ಸಹಕಾರ ಸಂಘವನ್ನು ಸಮಾಪನೆಗೊಳಿಸಿ, ಕಾಯಿದೆ ಕಲಂ 73(1) ರನ್ವಯ **ಸಹಕಾರ ಸಂಘಗಳ ನಿರೀಕ್ಷಕರು ಶಿವಮೊಗ್ಗ ತಾಲ್ಲೂಕು** ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿರುತ್ತೇನೆ.

ಸಮಾಪನಾಧಿಕಾರಿಗಳು ಕೂಡಲೇ ಸಂಘದ ಪ್ರಭಾರವನ್ನು ಪಡೆದು ಪ್ರಭಾರ ಪಟ್ಟಿಯ ಪ್ರತಿಯನ್ನು ಈ ಕಚೇರಿಗೆ ಸಲ್ಲಿಸತಕ್ಕದ್ದು. ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ಕಲಂ 74 ಮತ್ತು ನಿಯಮ 33 ರಂತೆ ಸಮಾಪನಾಧಿಕಾರಿಯ ಕರ್ತವ್ಯ ನಿರ್ವಹಿಸುವುದಲ್ಲದೆ, ಸಂಘದ ಇತ್ತೀಚಿನ ಲೆಕ್ಕ ತಪಾಸಣಾ ವರದಿಯನ್ನಾಧರಿಸಿ, ಈ ಕಛೇರಿಯ ಅನುಮೋಧನೆ ಪಡೆದು ಆಸ್ತಿ ಜವಾಬ್ದಾರಿಗಳನ್ನು ತ್ವರಿತವಾಗಿ ವಿಲೇವಾರಿ ಮಾಡಿ ಸಂಘದ ನೊಂದಣಿ ಕ್ರಮಾಂಕವನ್ನು ರದ್ದುಗೊಳಿಸಲು ಸೂಕ್ತ ಕ್ರಮ ಜರುಗಿಸುವುದು.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿ ಮೊಹರಿನೊಂದಿಗೆ ದಿನಾಂಕ:08–02–2013 ರಂದು ನೀಡಲಾಗಿದೆ.

**ಅಶೋಕ ವೆಂ.ಮೊರಬ**
ಸಹಕಾರ ಸಂಘಗಳ ಉಪ–ನಿಬಂಧಕರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**PR.148**

**ಸಹಕಾರ ಸಂಘಗಳ ಉಪ–ನಿಬಂಧಕರು ಶಿವಮೊಗ್ಗ ಜಿಲ್ಲೆ ಸಹಕಾರ ಭವನ ಆರ್‌ಟಿಓ ಕಚೇರಿ ರಸ್ತೆ ಶಿವಮೊಗ್ಗ.**

**ವಿಷಯ:–** ಸಮಾಪನೆಯಲ್ಲಿರುವ ರತನ್ ಕ್ರಾಫ್ಟ್ ಅಂಡ್ ಇಂಡಸ್ಟ್ರಿಯಲ್ ಕೋ ಆಪರೇಟಿವ್ ಸೊಸೈಟಿ ನಿ., ಕಾರ್ಗಲ್ ಸಾಗರ ತಾ ಈ ಸಹಕಾರ ಸಂಘವನ್ನು ಪುನ:ಶ್ಚೇತನಗೊಳಿಸುವ ಬಗ್ಗೆ.

**ಉಲ್ಲೇಖ:–**
1. ಈ ಕಛೇರಿಯ ಆದೇಶ ಸಂ: ಡಿಅರ್‌ಎಸ್: ಎಲ್‌ಕ್ಯೂಡಿ/ ಡಿಎಲ್‌ಎಸ್/ಸಿಅರ್–/2010–11 ದಿನಾಂಕ:03–02–2011 ಮತ್ತು ಮಾರ್ಪಾಡು ಆದೇಶ ದಿ:06–08–2011.
2. ಸಮಾಪನಾಧಿಕಾರಿಯವರ ಸಭೆಯ ನಡವಳಿ ದಿನಾಂಕ:– 11–12–2012
3. ಸ.ಸಂ.ಗಳ ಸಹಾಯಕ ನಿಬಂಧಕರು ಸಾಗರ ರವರ ಪತ್ರ ಸಂ:ಎಆರ್‌ಸಿಎಸ್–25/ಎಲ್‌ಕ್ಯೂಡಿ/ಸಿಆರ್–41/2012–13 ದಿನಾಂಕ: 12–12–2012.

**ಪ್ರಸ್ತಾವನೆ:–**

ಸಮಾಪನೆಯಲ್ಲಿರುವ ರತನ್ ಕ್ರಾಫ್ಟ್ ಅಂಡ್ ಇಂಡಸ್ಟ್ರಿಯಲ್ ಕೋ ಆಪರೇಟಿವ್ ಸೊಸೈಟಿ ಲಿ., ಕಾರ್ಗಲ್ ಸಾಗರ ತಾಲ್ಲೂಕು ಈ ಸಹಕಾರ ಸಂಘವನ್ನು ಈ ಕಛೇರಿಯ ಉಲ್ಲೇಖ (1)ರ ಆದೇಶದಲ್ಲಿ ಸಮಾಪನೆಗೊಳಿಸಿ, ಸಮಾಪನಾಧಿಕಾರಿ ನೇಮಕ ಮಾಡಿ ಆದೇಶಿಸಲಾಗಿತ್ತು. ನಂತರ ದಿನಾಂಕ: 06–08–2011 ರ ಆದೇಶದಲ್ಲಿ ಸಮಾಪನಾಧಿಕಾರಿಯನ್ನು ಮಾರ್ಪಾಡು ಮಾಡಿ ನೇಮಕ ಮಾಡಲಾಗಿತ್ತು.

ಸಮಾಪನಾಧಿಕಾರಿಗಳು ಸಂಘದ ಪ್ರಭಾರವನ್ನು ಪಡೆದಿರುತ್ತಾರೆ. ಸಂಘದ ಸದಸ್ಯರು ದಿನಾಂಕ:09-12-2012 ರ ಅರ್ಜಿಯಲ್ಲಿ ಬೆತ್ತದ ಕೆಲಸಗಾರರಿಗೆ ಜೀವನೋಪಾಯಕ್ಕೆ ತುಂಬಾ ತೊಂದರೆಯಾಗಿದೆ. ಸದಸ್ಯರಿಗೆ ಸಂಘದಿಂದ ಅಗತ್ಯ ಕೆಲಸ ಒದಗಿಸಿ ಅನುಕೂಲ ಕಲ್ಪಿಸುವ ಮತ್ತು ಸಂಘದಿಂದ ಅನಿಯಂತ್ರಿತ ವಸ್ತುಗಳನ್ನು ಮಾರಾಟ ಮಾಡಿ ಸಂಘವನ್ನು ಮುನ್ನೆಡಿಸಿಕೊಂಡು ಹೋಗುವುದಾಗಿ ತಿಳಿಸಿ, ಈ ಸಹಕಾರ ಸಂಘವನ್ನು ಪುನ:ಶ್ಚೇತನಗೊಳಿಸಿದ್ದಲ್ಲಿ ಸದಸ್ಯರಿಗೆ ಅನುಕೂಲವಾಗಲಿದೆ ಎಂದು ಸಮಾಪನಾಧಿಕಾರಿಯವರಿಗೆ ಮನವಿ ಸಲ್ಲಿಸಿ ಪುನಶ್ಚೇತನಗೊಳಿಸಿ ಕೊಡಲು ಕೋರಿರುತ್ತಾರೆ.

ಸಮಾಪನಾಧಿಕಾರಿಯವರು ದಿನಾಂಕ:11-12-2012 ರ ಸಭೆಯಲ್ಲಿ ಸದರಿ ಮನವಿಯನ್ನು ಪರಿಗಣಿಸಿ, ಸಂಘವನ್ನು ಪುನ:ಶ್ಚೇತನಗೊಳಿಸಲು ತೀರ್ಮಾನಿಸಿರುತ್ತಾರೆ, ಸಹಕಾರ ಸಂಘಗಳ ಸಹಾಯಕ ನಿಬಂಧಕರು ಸಾಗರರವರು ಸದರಿ ತೀರ್ಮಾನವನ್ನು ಅನುಮೋದಿಸಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರರವರು ಸದರಿ ಪ್ರಸ್ತಾವನೆಯನ್ನು ಷರತ್ತಿನೊಂದಿಗೆ ಪುನ:ಶ್ಚೇತನಗೊಳಿಸಲು ಕೋರಿ ಈ ಕಛೇರಿಗೆ ಉಲ್ಲೇಖ(3)ರ ಪತ್ರದೊಂದಿಗೆ ಪ್ರಸ್ತಾವನೆಯನ್ನು ಶಿಫಾರಸ್ಸು ಮಾಡಿ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯೊಂದಿಗೆ ಸದಸ್ಯರ ಮನವಿ, ಸಮಾಪನಾಧಿಕಾರಿಯವರ ನಿರ್ಣಯದ ಪ್ರತಿಯನ್ನು ಸಲ್ಲಿಸಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ, ಪರಿಗಣಿಸಿ, ಈ ಕೆಳಕಂಡ ಆದೇಶ ಹೊರಡಿಸಿದೆ.

**ಸಂ:ಡಿಅರ್‌ಎಸ್:ಎಲ್‌ಕ್ಯೂಡಿ/ಡಿಎಲ್‌ಎಸ್/ಸಿಅರ್-72/2010-11 ದಿನಾಂಕ:31-12-2012.**

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ಕಲಂ 72(3) ರನ್ವಯ ಮತ್ತು ಸರ್ಕಾರದ ಅಧಿಸೂಚನೆ ಸಂ:-ಸಿಒ 139 ಸಿಎಲ್‌ಎಂ 2011. ದಿನಾಂಕ:-17-02-2011 ರ ದತ್ತವಾದ ಅಧಿಕಾರದನ್ವಯ ಅಶೋಕ ವೆಂ.ಮೊರಬ. ಕೆ.ಸಿ.ಎಸ್. ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ರತನ್ ಕ್ರಾಫ್ಟ್ ಅಂಡ್ ಇಂಡಸ್ಟ್ರಿಯಲ್ ಕೋ ಆಪರೇಟಿವ್ ಸೊಸೈಟಿ ನಿ., ಕಾರ್ಗಲ್ ಸಾಗರ ತಾಲ್ಲೂಕು ಈ ಸಹಕಾರ ಸಂಘವನ್ನು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಪುನ:ಶ್ಚೇತನಗೊಳಿಸಿ ಆದೇಶಿಸಿರುತ್ತೇನೆ.

ಸಂಘದ ಉಪನಿಯಮ ಸಂಖ್ಯೆ 3 ರ ಉದ್ದೇಶಗಳನ್ನು ಅನುಷ್ಠಾನಗೊಳಿಸಲು ಕ್ರಮವಿಡುವುದು.

1) 3 ವರ್ಷಗಳವರೆಗೆ ಪ್ರತಿ ವರ್ಷ 25 ಹೊಸ ಸದಸ್ಯರನ್ನು ನೊಂದಾಯಿಸಿ ಷೇರು ಬಂಡವಾಳ ವೃದ್ಧಿಸಿಕೊಳ್ಳುವುದು.
2) ಸಂಘದಿಂದ ವ್ಯಾಪರ ವ್ಯವಹಾರವನ್ನು ನೆಡೆಸುವುದು. ಪ್ರತಿ ತಿಂಗಳು 1 ಲಕ್ಷ ವಹಿವಾಟು ನೆಡೆಸಬೇಕು.
3) ಸಂಘದ ಬೈಲಾದ ಉದ್ದೇಶಗಳನ್ನು ಅನುಷ್ಠಾನಗೋಳಿಸಿ, ಕಾರ್ಯನಿರ್ವಹಿಸುವುದು.

ಸಮಾಪನಾಧಿಕಾರಿಯವರು ಆಡಳಿತ ಮಂಡಳಿ ರಚನೆಗಾಗಿ ಕೂಡಲೇ ಕ್ರಮವಿಟ್ಟು ಪ್ರಭಾರ ವಹಿಸಿಕೊಡಲು ಹಾಗೂ ವರದಿ ಸಲ್ಲಿಸಲು ಸೂಚಿಸಿದೆ.

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿಯ ಮೊಹರಿನೊಂದಿಗೆ ದಿನಾಂಕ:31-12-2012 ರಂದು ನೀಡಿದೆ.

**ಅಶೋಕ ವೆಂ.ಮೊರಬ**
ಸಹಕಾರ ಸಂಘಗಳ ಉಪ-ನಿಬಂಧಕರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**PR.74**

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದ.ಕ.ಉಪವಿಭಾಗ-1, ಬೆಂದೂರ್ ವೆಲ್ ವೃತ್ತ ಕಂಕನಾಡಿ, ಮಂಗಳೂರು ಇವರ ನ್ಯಾಯಾಲಯ.

**ಸಂಖ್ಯೆ: ಡಬ್ಲ್ಯೂಸಿಎ/ಸಿ.ಆರ್-46/2012 (ಎಫ್) ದಿನಾಂಕ: 29-12-2012**

**ಅರ್ಜಿದಾರರು:**
1. ಶ್ರೀಮತಿ ಮಮತ ಶೆಟ್ಟಿ, ಕೋಂ: ಲೇಟ್ ಸುನೀಲ್‌ಶೆಟ್ಟಿ
2. ಸಮನ್ವಿ, ಬಿನ್: ಲೇಟ್ ಸುನೀಲ್‌ಶೆಟ್ಟಿ
ವಾಸ: ಎಡನ್ ಎನ್ಕ್ಲೇವ್ ಕೈಲಾಸ್ ಕಾಲನಿ, ಐಟಿಐ ಹತ್ತಿರ, ನಂತೂರು ಮಂಗಳೂರು.
3. ಶ್ರೀಮತಿ ಸೀತಾಶೆಟ್ಟಿ ಕೋಂ. ದಿ. ಈಶ್ವರ ಶೆಟ್ಟಿ, ವಾಸ: ಶ್ರೀದೇವಿ ಅಪಾರ್ಟಮೆಂಟ್ಸ್, ವಲ್ಲೆಪೇಟೆ, ಉರ್ವ ಮಾರ್ಕೆಟ್ ಬಳಿ, ಮಂಗಳೂರು.

**ವಿರುದ್ಧ**

**ಪ್ರತಿವಾದಿಗಳು:**
ದಿ ನ್ಯೂ ಮಂಗಳೂರು ಪೋರ್ಟ ಟ್ರಸ್ಟ್, ಪಣಂಬೂರು, ಮಂಗಳೂರು.

**ಅಧಿಸೂಚನೆ**

ಅರ್ಜಿದಾರರಾದ ಶ್ರೀಮತಿ ಮಮತ ಶೆಟ್ಟಿ ಕೋಂ ದಿ. ಸುನೀಲ್ ಶೆಟ್ಟಿ ಇವರು ತನ್ನ ಗಂಡನಾದ ದಿವಂಗತ ಶ್ರೀ ಸುನೀಲ್ ಶೆಟ್ಟಿ ರವರು ಪ್ರತಿವಾದಿಗಳಾದ ದಿ ನ್ಯೂ ಮಂಗಳೂರು ಪೋರ್ಟ ಟ್ರಸ್ಟ್, ಪಣಂಬೂರು, ಮಂಗಳೂರು. ಇವರಲ್ಲಿ ಕೆಲಸಗಾರರಾಗಿದ್ದು ಕೆಲಸದಲ್ಲಿ ನಿರತರಾಗಿದ್ದ ದಿ: 06-07-2011 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರೀತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ

ಪ್ರಕಟಣೆಯಾದಲ್ಲಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮು ಅರ್ಜಿ/ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

**ಮಹೇಶ್**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ದ.ಕ.ಉಪವಿಭಾಗ–1 ಮಂಗಳೂರು.

**PR.38**

## ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ

**ಉಪ ಆಯುಕ್ತರು (ಭೂಸ್ವಾಧೀನ) ರವರ ಕಛೇರಿ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಕೇಂದ್ರ ಕಛೇರಿ, ಮೊದಲನೇ ಮಹಡಿ, ಹೊಸ ಕಟ್ಟಡ (ಮೇಜರ್ ರೋಡ್ಸ್), ಅನೆಕ್ಸ್ ಬಿಲ್ಡಿಂಗ್ ಹಿಂಭಾಗ, ಎನ್.ಆರ್.ವೃತ್ತ, ಬೆಂಗಳೂರು–02.**

**ಸಂಖ್ಯೆ: ಎಲ್ಎಕ್ಯೂ/ಸಿಆರ್/09/2011–12ದಿನಾಂಕ:31–12–2012**

**ತಿದ್ದುಪಡಿ ಅಧಿಸೂಚನೆ**

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ವಾರ್ಡ್ ಸಂಖ್ಯೆ:165, ಗಣೇಶಮಂದಿರ (ಹಳೆ ವಾರ್ಡ್‌ನಂ.55) ಮತ್ತು ವಾರ್ಡ್ ನಂ.182 ಪದ್ಮನಾಭನಗರದಲ್ಲಿ ಬರುವ (ಹಳೆ ವಾರ್ಡ್‌ನಂ.56) ಕಿತ್ತೂರುರಾಣಿ ಚನ್ನಮ್ಮ ವೃತ್ತದಲ್ಲಿ ಮೇಲುಸೇತುವೆ ನಿರ್ಮಾಣ ಕಾಮಗಾರಿಗಾಗಿ ಪ್ರಸ್ತಾಪಿಸಿರುವ ಸ್ವತ್ತುಗಳಲ್ಲಿನ 28999.0 ಚ.ಅಡಿ ಪ್ರದೇಶವನ್ನು ಭೂಸ್ವಾಧೀನಪಡಿಸಿಕೊಳ್ಳಲು ಭೂಸ್ವಾಧೀನ ಕಾಯ್ದೆಯ ಕಲಂ 1894 ರ 4(1) ರ ಅಧಿಸೂಚನೆಯನ್ನು ದಿನಾಂಕ:–01–12–2011 ರಂದು ಹೊರಡಿಸಿದ್ದು, ಅದು ಕರ್ನಾಟಕ ರಾಜ್ಯ ಪತ್ರದ ಭಾಗ–3, ಪುಟ ಸಂಖ್ಯೆ:4026 ರಿಂದ 4033 ರವರೆಗೆ ಪ್ರಕಟವಾಗಿರುತ್ತದೆ. ಈ ಪ್ರಕಟಣೆಯಲ್ಲಿ ಪ್ರಕಟಿಸಿರುವ 28,999.0 ಚ.ಅಡಿಗೆ ಬದಲಾಗಿ 28,678.26 ಚ.ಅಡಿ ಎಂದು, ಓದಿಕೊಳ್ಳಬೇಕೆಂದೂ ಮಾಡಿದ ತಿದ್ದುಪಡಿಯಾಗಿರುತ್ತದೆ. ಇನ್ನುಳಿದಂತೆ ಯಾವುದೇ ಬದಲಾವಣೆಗಳು ಇರುವುದಿಲ್ಲ.

| 4(1) ಗೆಜೆಟ್ ಕ್ರಮಸಂಖ್ಯೆ | 4(1) ಪ್ರಕಟಣೆಯಲ್ಲಿ ಪ್ರಕಟವಾದ ವಿಸ್ತೀರ್ಣ (ಚ.ಅಡಿ.ಗಳಲ್ಲಿ) | ತಿದ್ದುಪಡಿಯಂತೆ ಓದಿಕೊಳ್ಳಬೇಕಾದ ವಿಸ್ತೀರ್ಣ (ಚ.ಅಡಿ.ಗಳಲ್ಲಿ) |
|---|---|---|
| 2 | 88.89 | 93.43 |
| 3 | 189.33 | 193.53 |
| 4 | 224.98 | 225.50 |
| 5 | 273.63 | 323.67 |
| 6 | 803.40 | 783.61 |
| 7 | 359.21 | 361.67 |
| 8 | 85.26 | 75.34 |
| 9 | 127.12 | 118.40 |
| 10 | 23.89 | 21.52 |
| 30 | 14,808.19 | 14.446.81 |

**ದಿನಾಂಕ: 31–11–2012**
**ಸ್ಥಳ: ಬೆಂಗಳೂರು**

**ಉಪ ಆಯುಕ್ತರು (ಭೂಸ್ವಾಧೀನ)**
**ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ**

**PD.40**

## ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ

**ಉಪ ಆಯುಕ್ತರು (ಭೂಸ್ವಾಧೀನ) ರವರ ಕಛೇರಿ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಕೇಂದ್ರ ಕಛೇರಿ, ಮೊದಲನೇ ಮಹಡಿ, ಹೊಸ ಕಟ್ಟಡ (ಮೇಜರ್ ರೋಡ್ಸ್), ಅನೆಕ್ಸ್ ಬಿಲ್ಡಿಂಗ್ ಹಿಂಭಾಗ, ಎನ್.ಆರ್.ವೃತ್ತ, ಬೆಂಗಳೂರು–02.**

**ಸಂಖ್ಯೆ: ಎಲ್ಎಕ್ಯೂ/ಸಿಆರ್/10/2010–11. ದಿನಾಂಕ:22–02–2013**

**ತಿದ್ದುಪಡಿ ಅಧಿಸೂಚನೆ**

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಹಂಪಿನಗರ ವಾರ್ಡ್ ಸಂಖ್ಯೆ:133 (ಹಳೇವಾರ್ಡ್ ಸಂಖ್ಯೆ:42) ರ ಬಾಪೂಜಿನಗದಲ್ಲಿನ ಖಾಸಗಿ ಸ್ವತ್ತುಗಳನ್ನ ರೈಲ್ವೆಹಳಿ ಲೆವೆಲ್ ಕ್ರಾಸಿಂಗ್ ನಂ.ಎಲ್.ಸಿ–5, (ಎಲ್.ಸಿ–5ಎ), ಹತ್ತಿರ ರೈಲ್ವೆ ಕೆಳಸೇತುವೆ ನಿರ್ಮಾಣ ಕಾಮಗಾರಿಗಾಗಿ ಸದರಿ ಸ್ವತ್ತುಗಳನ್ನು 1894 ರ ಭೂಸ್ವಾಧೀನಕಾಯ್ದೆಯ ಕಲಂ 4(1)ರನ್ವಯ ಭೂಸ್ವಾಧೀನಪಡಿಸಿಕೊಳ್ಳಲು ಪ್ರಾರಂಭಿಕ ಅಧಿಸೂಚನೆಯನ್ನು ದಿನಾಂಕ:21–03–2012 ರಂದು ಹೊರಡಿಸಿದ್ದು ಅದು ಕರ್ನಾಟಕ ರಾಜ್ಯ ಪತ್ರದ ಭಾಗ–3, ಪುಟ ಸಂಖ್ಯೆ:1876 ರಿಂದ 80 ರವರೆಗೆ ಪ್ರಕಟವಾಗಿರುತ್ತದೆ. ಈ ಪ್ರಕಟಣೆಯಲ್ಲಿ ಪ್ರಕಟಿಸಿರುವ ಅಂಕಣ 'ಎ' ರಲ್ಲಿ

ನಮೂದಿಸಿರವ ನಮೂದಗಳಿಗೆ ಬದಲಾಗಿ 'ಬಿ' ಅಂಕಣದಲ್ಲಿ ನಮೂದಿಸಿರುವ ನಮೂದುಗಳನ್ನು ತಿದ್ದುಪಡಿಮಾಡಲಾಗಿದೆ ಎಂದು ಓದಿಕೊಳ್ಳಬೇಕೆಂದೂ ಮಾಡಿದ ತಿದ್ದುಪಡಿಯಾಗಿರುತ್ತದೆ. ಇನ್ನುಳಿದಂತೆ ಯಾವುದೇ ಬದಲಾವಣೆಗಳು ಇರುವುದಿಲ್ಲ.

| 'ಅ' | | 'ಬ' |
|---|---|---|
| 4(1) ರ ಅಧಿಸೂಚನೆ ಕ್ರಮಸಂಖ್ಯೆ | 4(1) ಪ್ರಕಟಣೆಯಲ್ಲಿ ಪ್ರಕಟವಾದ ವಿಸ್ತೀರ್ಣ (ಚ.ಅಡಿ.ಗಳಲ್ಲಿ) | ತಿದ್ದುಪಡಿಯಂತೆ ಓದಿಕೊಳ್ಳಬೇಕಾದ ವಿಸ್ತೀರ್ಣ(ಚ.ಅಡಿ.ಗಳಲ್ಲಿ) ಮತ್ತು ಷರಾ |
| 1 | 1174.31 | ಈ ಸ್ವತ್ತಿನ ಖಾತೆದಾರರು ಟಿಡಿಆರ್ ನೀಡುವಂತೆ ಕೋರಿ ಪಾಲಿಕೆಗೆ ನೊಂದಾವಣೆ ಮಾಡಿ ಕೊಟ್ಟಿರುವುದರಿಂದ ಈ ಸ್ವತ್ತನ್ನು ಭೂಸ್ವಾಧೀನದಿಂದ ಕೈಬಿಡಲಾಗಿದೆ. |
| 2 | 853.00 | 850.14 |
| 6 ರಿಂದ 15 ರವರೆಗೆ | ಖಾತೆದಾರರು/ಅನುಭವದಾರರ ಹೆಸರು ಎಂಬ ಕಲಂನಲ್ಲಿ | ಈಗ ನಮೂದಾಗಿರುವವರು ಅನುಭವದಾರರೆಂದೂ, ಸ್ವತ್ತಿನ ಖಾತೆದಾರರು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಎಂದೂ. |

ದಿನಾಂಕ: 22-02-2013
ಸ್ಥಳ: ಬೆಂಗಳೂರು

ಉಪ ಆಯುಕ್ತರು (ಭೂಸ್ವಾಧೀನ)
ಬೃಹತ್ ಬೆಂಗಳೂರು ಮಹಾನಗರ, ಪಾಲಿಕೆ

PD.41

## ಮುದ್ರಣ ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ನಿರ್ದೇಶಕರ ಕಾರ್ಯಾಲಯ
## ಸರ್ಕಾರಿ ಲೇಖನ ಸಾಮಗ್ರಿ ಮಳಿಗೆ, ಮೈಸೂರು ರಸ್ತೆ, ಬೆಂಗಳೂರು-59

### ಅಧಿಸೂಚನೆ

2012-13ನೇ ಸಾಲಿನ ವಾರ್ಷಿಕ ಸರಕು ಪರಿಶೀಲನೆಯ ಪ್ರಯುಕ್ತ ಬೆಂಗಳೂರು, ಮೈಸೂರು, ಗುಲ್ಬರ್ಗಾ ಹಾಗೂ ಧಾರವಾಡಗಳಲ್ಲಿರುವ ಸರ್ಕಾರಿ ಲೇಖನ ಸಾಮಗ್ರಿ ಉಗ್ರಾಣಗಳಲ್ಲಿ ದಿನಾಂಕ: 01-04-2013 ರಿಂದ 20-04-2013 ರವರೆಗೆ ಎಲ್ಲಾ ಸರ್ಕಾರಿ ಕಛೇರಿಗಳಿಗೆ ಲೇಖನ ಸಾಮಗ್ರಿಗಳ ಮತ್ತು ಕಾಗದದ ನೀಡಿಕೆಯನ್ನು ನಿಲ್ಲಿಸಲಾಗುತ್ತಿದೆ ಎಂಬ ವಿಷಯವನ್ನು ಸಂಬಂಧಿಸಿದ ಎಲ್ಲಾ ಸರ್ಕಾರಿ ಕಛೇರಿ ಹಾಗೂ ಅರೆ ಸರ್ಕಾರಿ ಕಛೇರಿಗಳಿಗೆ ಈ ಮೂಲಕ ತಿಳಿಯಪಡಿಸಲಾಗಿದೆ.

ಎಂ. ರವಿಶಂಕರ್,
ನಿರ್ದೇಶಕರು.

## OFFICE OF THE DIRECTOR OF PRINTING STATIONERY AND PUBLICATION GOVERNMENT STATIONERY DEPOT, MYSORE ROAD, BANGALORE-59

### NOTIFICATION

It is hereby notified for the information of all the Government and semi Government Offices that there will be no issue of stationery articles and papers from the Government stationery Depot Bangalore, Mysore, Gulbarga, And Dharwad from 01-04-2013 to 20-04-2013 (Both days inclusive) on account of Annual Stock Verification for the year 2012-2013.

**M.Ravishankar.**
**Director.**

PR.172